KA / BG-GPO/2515/WPP-47/2009-2011



# ಕರ್ನಾಟಕ ರಾಜ್ಯಪತ್ರ

| ಸಂಪುಟ ೧೪೪ | ಬೆಂಗಳೂರು, ಗುರುವಾರ, ಏಪ್ರಿಲ್ ೨, ೨೦೦೯ (ಚೈತ್ರ ೧೨, ಶಕ ವರ್ಷ ೧೯೩೧) | ಸಂಚಿಕೆ ೧೪ |
| --- | --- | --- |

## ಭಾಗ-೩

## ಸರ್ಕಾರದ ಆಯಾ ಇಲಾಖೆಗಳ ಮುಖ್ಯಸ್ಥರ ಮತ್ತು ಸ್ಥಳೀಯ ಪ್ರಾಧಿಕಾರಿಗಳಿಗೆ ಸಂಬಂಧಿಸಿದ ಅಧಿಸೂಚನೆಗಳು

**ಆರ್ಥಿಕ ಮತ್ತು ಸಾಂಖ್ಯಿಕ ನಿರ್ದೇಶನಾಲಯ, ಬಹುಮಹಡಿಗಳ ಕಟ್ಟಡ, ಬೆಂಗಳೂರು**

**ಸಂಖ್ಯೆ: ಆಸಾನಿ:1/ ಆಡಳಿತ-2/2007-08, ಬೆಂಗಳೂರು, ದಿನಾಂಕ:11ನೇ ಫೆಬ್ರವರಿ, 2009**

**ವಿಷಯ:** 1) ಶ್ರೀ ಆದಿಕುಮಾರ್, ಪ್ರಥಮ ದರ್ಜೆ ಸಹಾಯಕರು, ಪ್ರಸ್ತುತ ದಿನಾಂಕ: 24-12-2008 ರಿಂದ ಜಿಲ್ಲಾ ಸಾಂಖ್ಯಿಕ ಅಧಿಕಾರಿಗಳ ಕಚೇರಿ, ಕೋಲಾರ ಬೆಂಗಳೂರು ಗ್ರಾಮಾಂತರ ಮತ್ತು ರಾಮನಗರ ಜಿಲ್ಲಾ ಸಾಂಖ್ಯಿಕ ಅಧಿಕಾರಿಗಳ ಕಚೇರಿಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದ ಅವಧಿಯಲ್ಲಿ ಎಸಗಿದ ಕರ್ತವ್ಯಲೋಪ, ಅನಧಿಕೃತ ಗೈರು ಹಾಜರಾಗುವ ಪ್ರವೃತ್ತಿ, ಸರ್ಕಾರದ ದಾಖಲಾತಿಗಳ ಬದಲಾವಣೆ (tampering of office records) ಇತ್ಯಾದಿ ಆರೋಪಗಳ ಮೇಲೆ ಅಮಾನತ್ತುಗೊಂಡ ನಂತರ ಸೇವೆಗೆ ಪುನರ್ ಸ್ಥಾಪನೆಗೊಂಡಿರುವ ಸರ್ಕಾರಿ ನೌಕರ)ಇವರ ವಿರುದ್ಧ ಇಲಾಖಾ ವಿಚಾರಣೆ ಏರ್ಪಡಿಸುವ ಕುರಿತು -ವಿಚಾರಣಾಧಿಕಾರಿಗಳನ್ನು ನೇಮಿಸುವ ಬಗ್ಗೆ.

**ಉಲ್ಲೇಖ:** 1) ಜಿಲ್ಲಾ ಸಂಖ್ಯಾ ಸಂಗ್ರಹಣಾಧಿಕಾರಿಗಳು, ರಾಮನಗರ ಜಿಲ್ಲೆ, ಇವರ ಪತ್ರದ ಸಂಖ್ಯೆ: ಜಿಸಂಸಂ/ ರಾಮ /152 /08-09, ದಿನಾಂಕ: 20-5-2008.

2) ಜಿಲ್ಲಾ ಸಂಖ್ಯಾ ಸಂಗ್ರಹಣಾಧಿಕಾರಿಗಳು, ಬೆಂಗಳೂರು ಗ್ರಾಮಾಂತರಜಿಲ್ಲೆ, ಇವರ ಪತ್ರದ ಸಂಖ್ಯೆ:ಜಿಸಂಸಂ/ಆಡಳಿತ/282/07-08 ದಿ:23.5.2008.

3) ಜಿಲ್ಲಾ ಸಂಖ್ಯಾ ಸಂಗ್ರಹಣಾಧಿಕಾರಿಗಳು, ರಾಮನಗರ ಜಿಲ್ಲೆ, ಇವರ ಪತ್ರದ ಸಂಖ್ಯೆ: ಜಿಸಂಸಂ/ ರಾಮ/152/08-09, ದಿನಾಂಕ: 30-6-2008

4) ಈ ನಿರ್ದೇಶನಾಲಯದ ಇದೇ ಕ್ರಮಾಂಕದ ಆದೇಶದ ಸಂಖ್ಯೆ:ಆಡಳಿತ/16/2008-09, ದಿನಾಂಕ: 12-7-2008.

5) ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ)ನಿಯಮಗಳು, 1954ರ ನಿಯಮ: 11ರ ಅಡಿಯಲ್ಲಿ ಹೊರಡಿಸಲಾದ ಈ ನಿರ್ದೇಶನಾಲಯದ ಇದೇ ಕ್ರಮಾಂಕ ಕಾರಣ ಕೇಳುವ ಜ್ಞಾಪನದ ದಿನಾಂಕ: 17-9-2008.

6) ಸೇವೆಯಲ್ಲಿ ಅಮಾನತ್ತಿನಲ್ಲಿದ್ದ ಶ್ರೀ ಆದಿಕುಮಾರ್, ಪ್ರಥಮ ದರ್ಜೆಸಹಾಯಕರು, ಸಲ್ಲಿಸಿದ ಕೋರಿಕೆ ದಿನಾಂಕ: 27-10-2008.

7) ನಿರ್ದೇಶನಾಲಯದ ಇದೇ ಕ್ರಮಾಂಕದ ಜ್ಞಾಪನದ ದಿನಾಂಕ: 7-11-2008.

8) ಆಪಾದಿತ ಸರ್ಕಾರಿ ನೌಕರರಾದ ಶ್ರೀ ಆದಿಕುಮಾರ್, ಅವರ ಮನವಿ ದಿನಾಂಕ: 25-11-2008.

9) ನಿರ್ದೇಶನಾಲಯದ ಇದೇ ಕ್ರಮಾಂಕದ ಆದೇಶದ ಸಂಖ್ಯೆ:ಆಡಳಿತ/ 412 /2008-09 ದಿನಾಂಕ:22-12-2008.

10) ಈ ನಿರ್ದೇಶನಾಲಯದ ಇದೇ ಕ್ರಮಾಂಕದ ಜ್ಞಾಪನ ದಿನಾಂಕ: 22-12-2008.

11) ಶ್ರೀ ಆದಿಕುಮಾರ್, ಪ್ರಥಮ ದರ್ಜೆ ಸಹಾಯಕರು ಇವರ ಮನವಿ ದಿ:5/01/2009.

12) ಈ ನಿರ್ದೇಶನಾಲಯದ ಇದೇ ಕ್ರಮಾಂಕದ ಜ್ಞಾಪನದ ದಿ: /1/2009

**ಪ್ರಸ್ತಾವನೆ:**

ಈ ನಿರ್ದೇಶನಾಲಯದ ಪ್ರಥಮ ದರ್ಜೆ ಸಹಾಯಕರಾದ ಶ್ರೀ ಆದಿಕುಮಾರ್, ಇವರನ್ನು ಕಚೇರಿ ಆದೇಶದ ಸಂಖ್ಯೆ:ಆಡಳಿತ/260/2006-07 ದಿನಾಂಕ:29-6-2006ರಲ್ಲಿ ಕೇಂದ್ರ ಕಚೇರಿಯಿಂದ ಜಿಲ್ಲಾ ಸಂಖ್ಯಾ ಸಂಗ್ರಹಣಾಧಿಕಾರಿಗಳ ಕಚೇರಿ, ಬೆಂಗಳೂರು ಗ್ರಾಮಾಂತರ ಜಿಲ್ಲೆ, ಇಲ್ಲಿ ಅನ್ಯ ಕರ್ತವ್ಯದ ಮೇಲೆ ನಿಯೋಜಿಸಲಾಗಿತ್ತು. ಈ ಅವಧಿಯಲ್ಲಿ ಶ್ರೀ ಆದಿಕುಮಾರ್, ಪ್ರಥಮ ದರ್ಜೆ ಸಹಾಯಕರು, ಇವರ ನಿರಂತರವಾದ ಅನಧಿಕೃತ ಗೈರು ಹಾಜರಾತಿ, ಸ್ವಹಿತಾಸಕ್ತಿ ಆಧರಿಸಿ ಕರ್ತವ್ಯ ನಿರ್ವಹಣೆ, ಕಚೇರಿ ಮುಖ್ಯಸ್ಥರಿಗೆ ತಪ್ಪು ಮಾಹಿತಿ ನೀಡಿ ತನಗೆ ಅನುಕೂಲವಾಗುವ ರೀತಿಯಲ್ಲಿ ಪತ್ರ ವ್ಯವಹಾರ ಮಾಡುವುದು, ನಂಬಿಕೆ ದ್ರೋಹ ಎಸಗುವುದು, ಇಲ್ಲಿ ದುರ್ನಡತೆ ಕಾರಣಗಳಿಂದಾಗಿ, ಅವರನ್ನು ಸೇವೆಯಿಂದ ಅಮಾನತ್ತುಗೊಳಿಸುವುದರ ಬದಲಾಗಿ ಈ ನಿರ್ದೇಶನಾಲಯದ ಆದೇಶದ ಸಂಖ್ಯೆ:ಆಡಳಿತ/665/2007-08, ದಿನಾಂಕ: 11-1-2008ರಲ್ಲಿ ಅವರನ್ನು ಜಿಲ್ಲಾ ಸಂಖ್ಯಾ ಸಂಗ್ರಹಣಾಧಿಕಾರಿಗಳ ಕಚೇರಿ, ರಾಮನಗರ ಜಿಲ್ಲೆ, ಇಲ್ಲಿಗೆ ವರ್ಗಾವಣೆ ಮಾಡಲಾಗಿತ್ತು. ಸದರಿ ಅವರು ರಾಮನಗರ ಜಿಲ್ಲೆಗೆ ವರ್ಗಾವಣೆ ಹೊಂದಿದ್ದರಿಂದ, ಜಿಲ್ಲಾ ಸಂಖ್ಯಾ ಸಂಗ್ರಹಣಾಧಿಕಾರಿಗಳು, ಬೆಂಗಳೂರು ಗ್ರಾಮಾಂತರ ಜಿಲ್ಲೆ, ಇವರ ಆದೇಶದ ಸಂಖ್ಯೆ:ಆಡಳಿತ/57/2007-08, ದಿನಾಂಕ:29-1-2008ರಲ್ಲಿ ಇನ್ನಿತರ ವಿಷಯಗಳೊಂದಿಗೆ **"ಶ್ರೀ ಆದಿಕುಮಾರ್, ಪ್ರಥಮ ದರ್ಜೆ ಸಹಾಯಕರು, ಇವರ ಪ್ರಭಾರವನ್ನು ಶ್ರೀಮತಿ ಮಂಜುಳಾ, ಬೆರಳಚ್ಚುಗಾರರು, ಇವರು ವಹಿಸಿಕೊಳ್ಳುವಂತೆ ಸೂಚಿಸಿದ್ದರಿಂದ"**, ಆ ಕಚೇರಿಯಲ್ಲಿ ಸದರಿ ಶ್ರೀ ಆದಿಕುಮಾರ್ ಪ್ರಥಮ ದರ್ಜೆ ಸಹಾಯಕರು, ಇವರು ನಿರ್ವಹಿಸುತ್ತಿರುವ ಆಡಳಿತ ಮತ್ತು ಲೆಕ್ಕ ವಿಭಾಗಕ್ಕೆ ಸಂಬಂಧಿಸಿದ ಎಲ್ಲಾ ದಾಖಲಾತಿಗಳನ್ನು ವಹಿಸತಕ್ಕದ್ದು, ಅವರ ಜವಾಬ್ದಾರಿಯಾಗಿದ್ದರೂ (As per Rule: 8 (i) of "Hand Book of Office Procedure which reads as "case worker shall prepare, whenever there is a transfer, a detailed list of all the papers and cases pending with him reference to the special Registers, Periodical Register and case Register and hand-over Complete charge of these records and registers to his successors) ಪ್ರಭಾರವನ್ನು ವಹಿಸುವ ಬಗ್ಗೆ ಈ ವಿಧಾನವನ್ನು ಅನುಸರಿಸಿದರೆ ಅತ್ಯಂತ ಬೇಜವಾಬ್ದಾರಿ ರೀತಿಯಲ್ಲಿ ವರ್ತಿಸಿದ್ದರಿಂದ ಹಾಗೂ ಸದರಿ ಪ್ರಥಮ ದರ್ಜೆ ಸಹಾಯಕರ ದುರ್ನಡತೆಯಿಂದ ಆ ಕಚೇರಿಯ ಸಿಬ್ಬಂದಿಗಳ ಸೇವಾ ವಿಷಯಗಳ ನಿರ್ವಹಣೆ ಮತ್ತು ಲೆಕ್ಕ ವಿಭಾಗದ ಕಾರ್ಯಗಳು ಸ್ಥಗಿತಗೊಂಡಿದ್ದರಿಂದ, ಅವರಿಗೆ ನೀಡಲಾದ ಕಪಾಟಿನ ಬೀಗವನ್ನು ದಿನಾಂಕ: 23-5-2008 ರಂದು ಬೆಂಗಳೂರು ಗ್ರಾಮಾಂತರ ಜಿಲ್ಲಾ ಸಂಖ್ಯಾ ಸಂಗ್ರಹಣಾಧಿಕಾರಿಗಳು ಮತ್ತು ಸಿಬ್ಬಂದಿಗಳ ಉಪಸ್ಥಿತಿಯಲ್ಲಿ ಬಲವಂತವಾಗಿ ತೆರೆಯಿಸಿ ಅವರು ನಿರ್ವಹಿಸುತ್ತಿದ್ದ/ಬಾಕಿ ಇರಿಸಿಕೊಂಡಿದ್ದ ಪತ್ರ ವ್ಯವಹಾರ, ಸಿಬ್ಬಂದಿಗಳ ಸೇವಾ ಪುಸ್ತಕಗಳು, ಕಡತಗಳು, ಹಾಗೂ ಇನ್ನಿತರ ದಾಖಲಾತಿಗಳನ್ನು (ಒಟ್ಟು 141) ಕಚೇರಿ ವಶಕ್ಕೆ ಪಡೆದುಕೊಡುವ ಕುರಿತು ಉಲ್ಲೇಖ (2) ರಲ್ಲಿನ ಬೆಂಗಳೂರು ಗ್ರಾಮಾಂತರ ಜಿಲ್ಲೆ ಸಂಖ್ಯಾ ಸಂಗ್ರಹಣಾಧಿಕಾರಿಗಳ ಕಚೇರಿ ಆದೇಶದಲ್ಲಿ ವರದಿಯಾಗಿರುತ್ತದೆ.

2) ಶ್ರೀ ಆದಿಕುಮಾರ್, ಪ್ರಥಮ ದರ್ಜೆ ಸಹಾಯಕರು, ಇವರು ರಾಮನಗರ ಜಿಲ್ಲಾ ಸಂಖ್ಯಾ ಸಂಗ್ರಹಣಾಧಿಕಾರಿಗಳ ಕಚೇರಿಯಲ್ಲಿ ಅನ್ಯ ಕರ್ತವ್ಯದ ಮೇಲೆ, ನಂತರ ಅದೇ ಕಚೇರಿಗೆ ವರ್ಗಾವಣೆ ಹೊಂದಿ ಕರ್ತವ್ಯಕ್ಕೆ ವರದಿ ಮಾಡಿಕೊಂಡ ನಂತರದ ಅವಧಿಯಲ್ಲಿ ಕೂಡ ಅವರ ಅನಧಿಕೃತ ಗೈರುಹಾಜರಾತಿ, ಬೇಜವಾಬ್ದಾರಿತನ, ಕರ್ತವ್ಯಲೋಪ, ಇತ್ಯಾದಿ ಪ್ರವೃತ್ತಿಯನ್ನು ನಿರಂತರವಾಗಿ ಮುಂದುವರೆಸಿದ್ದರಿಂದ, ಶ್ರೀ ಆದಿಕುಮಾರ್, ಪ್ರಥಮ ದರ್ಜೆ ಸಹಾಯಕರು, ಇವರಿಗೆ ಅವರ ಮನೆ ವಿಳಾಸಕ್ಕೆ ನೀಡಲಾದ ಜ್ಞಾಪನದ ಸಂಖ್ಯೆ:ಜಿಸಂಸಂ/ರಾಮ/ಆಡಳಿತ/30/07-08, ದಿನಾಂಕ:15.5.2008ರಲ್ಲಿ, ಸದರಿ ಅವರು ದಿನಾಂಕ:23.4.2008ರಂದು ಹಾಗೂ, ದಿನಾಂಕ:24.4.2008ರಂದು ಹಾಗೂ, ದಿನಾಂಕ:1.5.2008 ರಿಂದ 15.5.2008ರ ವರೆಗಿನ ಅನಧಿಕೃತ ಗೈರುಹಾಜರಾತಿಯಿಂದ ಅವರ ಕಚೇರಿಯ ಸಿಬ್ಬಂದಿಗಳ ಮಾಸಿಕ ವೇತನ ಬಿಲ್ಲು ತಯಾರಿಕೆ ಸಹಿತವಾಗಿ ಆಡಳಿತ ಮತ್ತು ಲೆಕ್ಕ ವಿಭಾಗದ ಕರ್ತವ್ಯ ನಿರ್ವಹಣೆ ಸಂಪೂರ್ಣವಾಗಿ ಸ್ಥಗಿತಗೊಂಡಿರುವುದನ್ನು ವಿವರಿಸಿ, ಕರ್ತವ್ಯಕ್ಕೆ ಹಾಜರಾಗುವಂತೆ ಸೂಚಿಸಲಾಗಿದ್ದರೂ, ಅವರು ಕರ್ತವ್ಯಕ್ಕೆ ಅನಧಿಕೃತ ಗೈರುಹಾಜರಾತಿಯನ್ನು ಮುಂದುವರೆಸಿದ್ದರಿಂದ ಕಚೇರಿಯ ಆಡಳಿತ ಮತ್ತು ಲೆಕ್ಕ ವಿಭಾಗದ ಕರ್ತವ್ಯಗಳ ಹಿತದೃಷ್ಟಿಯಿಂದ ಹಾಗೂ ಆ ವಿಭಾಗದ ಕಾರ್ಯಗಳು ಸ್ಥಗಿತಗೊಂಡಿರುವುದರಿಂದ ಕಚೇರಿ ಕಾರ್ಯಗಳ ನಿರ್ವಹಣೆಗಾಗಿ ಅವರಿಗೆ ನೀಡಲಾದ ಕಪಾಟಿನ ಬೀಗವನ್ನು ದಿನಾಂಕ:15-5-2008 ರಂದು ರಾಮನಗರ ಜಿಲ್ಲಾ ಸಂಖ್ಯಾ ಸಂಗ್ರಹಣಾಧಿಕಾರಿಗಳು ಮತ್ತು ಸಿಬ್ಬಂದಿಗಳ ಉಪಸ್ಥಿತಿಯಲ್ಲಿ ಬಲವಂತವಾಗಿ ತೆರೆಯಿಸಿ,

ಅವರು ನಿರ್ವಹಿಸುತ್ತಿದ್ದ/ಬಾಕಿ ಇರಿಸಿಕೊಂಡಿದ್ದ ಪತ್ರವ್ಯವಹಾರ, ಸೇವಾ ಪುಸ್ತಕಗಳು, ಕಡತಗಳನ್ನು ಹಾಗೂ ಇನ್ನಿತರ ದಾಖಲಾತಿಗಳನ್ನು ಕಚೇರಿ ವಶಕ್ಕೆ ಪಡೆದುಕೊಂಡಿರುವ ಕುರಿತು ಉಲ್ಲೇಖ(1) ರಲ್ಲಿನ ಜಿಲ್ಲಾ ಸಂಖ್ಯಾ ಸಂಗ್ರಹಣಾಧಿಕಾರಿಗಳು, ರಾಮನಗರ, ಇವರ ಪತ್ರದಲ್ಲಿ ವರದಿ ಸಲ್ಲಿಸಿರುತ್ತಾರೆ.

3) ಸದರಿ ಶ್ರೀ ಆದಿಕುಮಾರ್, ಪ್ರಥಮ ದರ್ಜೆ ಸಹಾಯಕರು, ಇವರು ಸರ್ಕಾರದ ಹಣಕಾಸಿನ ವಿಷಯಕ್ಕೆ ಸಂಬಂಧಿಸಿದ ದಾಖಲಾತಿಗಳನ್ನು ಅವರಿಗೆ ಅನುಕೂಲವಾಗುವ ದುರುದ್ದೇಶದಿಂದ ಬದಲಾಯಿಸಿ ಗಂಭೀರವಾದ ದಂಡಾರ್ಹ ದುರ್ನಡತೆ (criminal misconduct) ಪ್ರದರ್ಶಿಸಿ ನಂಬಿಕೆ ದ್ರೋಹ ಎಸಗಿರುವುದು ಮೇಲ್ನೋಟಕ್ಕೆ ಸಾಬೀತಾಗಿರುವ ಕುರಿತು, ರಾಮನಗರ ಜಿಲ್ಲಾ ಸಂಖ್ಯಾ ಸಂಗ್ರಹಣಾದಿಕಾರಿಗಳು, ಕರ್ತವ್ಯಕ್ಕೆ ಅನಧಿಕೃತವಾಗಿ ಗೈರುಹಾಜರಾಗಿದ್ದ ಶ್ರೀ ಆದಿಕುಮರ್, ಪ್ರಥಮ ದರ್ಜೆ ಸಹಾಯಕರಿಗೆ, ಅವರ ಮನೆ ವಿಳಾಸಕ್ಕೆ ನೀಡಲಾದ ಜ್ಞಾಪನದ ಸಂಖ್ಯೆ:ಜಿಸಂಸಂ/ರಾಮ/ಆಡಳಿತ/338–40/2008–09, ದಿನಾಂಕ: 26–6–2008ರಲ್ಲಿ "ಅವರ ಕಚೇರಿಯ ದ್ವಿತೀಯ ದರ್ಜೆ ಸಹಾಯಕರಾದ ಕುಮಾರಿ ಆರ್.ಜ್ಯೋತಿ, ಇವರ ಅಕ್ಟೋಬರ್ 2007 ರಿಂದ ಫೆಬ್ರವರಿ 2008ರ ವರೆಗಿನ ವೇತನ ರೂ.34,774/– ಗಳನ್ನು ಡ್ರಾ ಮಾಡಿ, ವೇತನ ಬಟವಾಡೆ ಪುಸ್ತಕದಲ್ಲಿ ರೂ. 34774/– ಎಂದು ಇದ್ದ ಮೊತ್ತವನ್ನು ರೂ.32774/– ಎಂದು ತಿದ್ದಿರುವ ಕುರಿತು ಅವರ ವಿವರಣೆ ನೀಡುವಂತೆ, ನೀಡಲಾದ ಜ್ಞಾಪನ, ಸದರಿ ಪ್ರಥಮ ದರ್ಜೆ ಸಹಾಯಕರು, ಶ್ರೀಮತಿ ಪಿ.ಮಂಜು, ಗಣತಿದಾರರು, ಜಿಲ್ಲಾ ಸಂಖ್ಯಾ ಸಂಗ್ರಹಣಾಧಿಕಾರಿಗಳ ಕಚೇರಿ, ರಾಮನಗರ, ಹಾಗೂ ಶ್ರೀಮತಿ ವೀಣಾ ಕುಲಕರ್ಣಿ, ಗಣತಿದಾರರು, ತಾಲ್ಲೂಕು ಕಚೇರಿ, ಹೊಸಕೋಟೆ (ಬೆಂಗಳೂರು ಗ್ರಾಮಾಂತರ ಜಿಲ್ಲೆ) ಇವರುಗಳಿಂದ ತಲಾ ರೂ.2500/– ಮತ್ತು ರೂ.5600/– ಗಳನ್ನು, ಸರ್ಕಾರದ ಕಚೇರಿಗಳಲ್ಲಿ ಅನುಷ್ಠಾನಗೊಳಿಸದೆ ಇದ್ದ ಉದ್ದೇಶಕ್ಕಾಗಿ ಅನಧಿಕೃತವಾಗಿ ಹಣ ವಸೂಲು ಮಾಡಿರುವ ಆಪಾದನೆ ಹಾಗೂ ಅವರ ವರದಿ ಇನ್ನಿತರ ಗಂಭೀರ ಸ್ವರೂಪದ ಆರೋಪಗಳ ಮೇಲೆ ಈ ನಿರ್ದೇಶನಾಲಯದ ಉಲ್ಲೇಖ (4) ರಲ್ಲಿನ ಇದೇ ಕ್ರಮಾಂಕದ ಆದೇಶದ ದಿನಾಂಕ: ಆಡಳಿತ/216/2008–09, ದಿನಾಂಕ: 17–7–2008 ರಲ್ಲಿ ಅವರ ಮೇಲಿನ ಆರೋಪಗಳಿಗೆ ಸಂಬಂಧಿಸಿದಂತೆ, ಅವರ ವಿರುದ್ಧ ಇಲಾಖಾ ವಿಚಾರಣೆ ಕಾಯ್ದಿರಿಸಿ ಅವರನ್ನು ಸರ್ಕಾರದ ಸೇವೆಯಿಂದ ಅಮಾನತ್ತುಗೊಳಿಸಲಾಗಿತ್ತು. (ಈ ಅಮಾನತ್ತು ಆದೇಶದ ಪ್ರತಿಯನ್ನು ಈ ಆದೇಶದ ಒಂದು ಭಾಗವಾಗಿ **ಅನುಬಂಧ–ಎ** ರಲ್ಲಿ ನೀಡಲಾಗಿದೆ.)

4) ಮೇಲೆ ವಿವರಿಸಿದಂತೆ ಹಾಗೂ "ಅನುಬಂಧ–ಎ"ರಲ್ಲಿನ ಅಮಾನತ್ತು ಆದೇಶದ ಅನ್ವಯ, ಶ್ರೀ ಆದಿಕುಮಾರ್, ಪ್ರಥಮ ದರ್ಜೆ ಸಹಾಯಕರು, ಇವರು ಬೆಂಗಳೂರು ಗ್ರಾಮಾಂತರ ಜಿಲ್ಲಾ ಸಂಖ್ಯಾ ಸಂಗ್ರಹಣಾಧಿಕಾರಿಗಳ ಕಚೇರಿಯಲ್ಲಿ (ನಿಯೋಜನೆ ಮೇಲೆ) ನಂತರ ಜಿಲ್ಲಾ ಸಾಂಖ್ಯಿಕ ಅಧಿಕಾರಿಗಳ ಕಚೇರಿ, ರಾಮನಗರ ಜಿಲ್ಲೆ ಇಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದ ಅವಧಿಯಲ್ಲಿ ಎಸಗಿದ ಕರ್ತವ್ಯಲೋಪ, ದಂಡಾರ್ಹ ದುರ್ನಡತೆ, ನಿರಂತರವಾದ ಅನಧಿಕೃತ ಗೈರುಹಾಜರಾತಿ, ಇತ್ಯಾದಿ ಆಪಾದನೆಗಳನ್ನೊಳಗೊಂಡಂತೆ, ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ ನಿಯಂತ್ರಣ, ಮತ್ತು ಮೇಲ್ಮನವಿ) ನಿಯಮಗಳು, 1957ರ ನಿಯಮ: 11ರ ಅನ್ವಯ, ಅವರ ಮೇಲಿನ "ಆರೋಪಗಳಿಗೆ ಸಂಬಂಧಿಸಿದ ವಿವರಣೆಯನ್ನು, ಆರೋಪಗಳನ್ನು ಸಮರ್ಥಿಸುವ ದಸ್ತಾವೇಜುಗಳನ್ನು ಹಾಗೂ ಸಾಕ್ಷಿಪಟ್ಟಿಯನ್ನು" ಈ ಕೆಳಗೆ ತಿಳಿಸಲಾದ 12–ಆರೋಪಗಳನ್ನೊಳಗೊಂಡಂತೆ ಅನುಕ್ರಮವಾಗಿ ಅನುಬಂಧ–1 ರಿಂದ 4ರ ವರೆಗೆ ಲಗತ್ತಿಸಿ, ಉಲ್ಲೇಖ(5) ರಲ್ಲಿ ಹೊರಡಿಸಲಾದ " ಕಾರಣ ಕೇಳುವ ಜ್ಞಾಪನ" ದಿನಾಂಕ: 17–9–2008ರಲ್ಲಿ ಅದು ಅವರಿಗೆ ಜಾರಿಯಾದ 15–ದಿನಗಳ ಒಳಗಾಗಿ ಅವರ ಮೇಲೆ ಹೊರಿಸಲಾದ ಆರೋಪಗಳಿಗೆ ಸಂಬಂಧಿಸಿದಂತೆ, ಅವರ ಲಿಖಿತ ಹೇಳಿಕೆಯನ್ನು ಸಲ್ಲಿಸತಕ್ಕದ್ದೆಂದು ಸೂಚಿಸಲಾಗಿತ್ತು.

**ಆರೋಪ : 1**

ಶ್ರೀ ಆದಿಕುಮಾರ್, ಈ ನಿರ್ದೇಶನಾಲಯದ ಪ್ರಥಮ ದರ್ಜೆ ಸಹಾಯಕರಾದ (ಪ್ರಸ್ತುತ ಅಮಾನತ್ತಿನಲ್ಲಿ) ಹಾಗೂ ಆಪಾದಿತ ದುರ್ನಡತೆ (alleged misconduct) ಹೊಂದಿದ ನೀವು ಬೆಂಗಳೂರು ಗ್ರಾಮಾಂತರ ಜಿಲ್ಲಾ ಸಂಖ್ಯಾ ಸಂಗ್ರಹಣಾಧಿಕಾರಿಗಳ ಕಚೇರಿಯಲ್ಲಿ ನಿಯೋಜನೆ ಮೇಲೆ ಕರ್ತವ್ಯ ನಿರ್ವಹಿಸುತ್ತಿದ್ದ ಅವಧಿಗೆ ಸಂಬಂಧಿಸಿದಂತೆ, ಬೆಂಗಳೂರು ಗ್ರಾಮಾಂತರ ಜಿಲ್ಲಾ ಸಂಖ್ಯಾ ಸಂಗ್ರಹಣಾಧಿಕಾರಿಗಳು ದಿನಾಂಕ: 21.05.2007 ರ ಪತ್ರದಲ್ಲಿ ಇನ್ನಿತರ ವಿಷಯಗಳೊಂದಿಗೆ ನಿಮ್ಮ ಅನಧಿಕೃತ ಗೈರುಹಾಜರಾತಿ ಕಾರಣದಿಂದ ಅವರ ಕಛೇರಿ ಸಿಬ್ಬಂದಿಗಳ ಸೇವಾ ವಿಷಯ ನಿರ್ವಹಣೆ, ವೇತನ ಬಿಲ್ಲು ತಯಾರಿಕೆ, ಇತ್ಯಾದಿ ಕರ್ತವ್ಯ ನಿರ್ವಹಣೆಗೆ ತೊಂದರೆಯಾಗುತ್ತಿದ್ದ, ನಿಮ್ಮ ಸೇವೆಯನ್ನು ಅವರ ಕಛೇರಿಯಿಂದ ಹಿಂದಕ್ಕೆ ಪಡೆಯಬೇಕೆಂದು ಕೋರಿದರು. ಈ ಪ್ರಸ್ತಾವನೆಯನ್ನು ಪರಿಶೀಲಿಸುವ ಹಂತದಲ್ಲಿ ಜಿಲ್ಲಾ ಸಂಖ್ಯಾ ಸಂಗ್ರಹಣಾಧಿಕಾರಿಗಳು, ಬೆಂಗಳೂರು ಗ್ರಾಮಾಂತರ ಜಿಲ್ಲೆ, ಪ್ರಸ್ತುತ ಇಲಾಖಾ ವಿಚಾರಣೆ ಪ್ರಕರಣದಲ್ಲಿ ಆಪಾದಿತ ದುರ್ನಡತೆ ಹೊಂದಿದ ಸರ್ಕಾರಿ ನೌಕರರಾದ ನಿಮ್ಮ ಸ್ವಂತ ಕೈಬರಹದಿಂದ ಬರೆಯಲಾದ ಪತ್ರದ ಸಂಖ್ಯೆ:ಜಿಸಂಸಂಬೆಂಗ್ರಾ/ಆಡಳಿತ/06–07, ದಿನಾಂಕ: 13.07.2007 ರಲ್ಲಿ "ಶ್ರೀ ಆದಿಕುಮಾರ್, ಪ್ರಥಮ ದರ್ಜೆ ಸಹಾಯಕರು, ಈ ಕಛೇರಿಯಲ್ಲಿ ಉತ್ತಮವಾಗಿ ಕಾರ್ಯನಿರ್ವಹಿಸುತ್ತಿರುವುದರಿಂದ ಇವರನ್ನು ವರ್ಗಾವಣೆ ಮಾಡಬಾರದಾಗಿ ತಮ್ಮಲ್ಲಿ ವಿನಂತಿಸಿಕೊಳ್ಳುತ್ತೇನೆ" ಎಂದು

ಮರುಪ್ರಸ್ತಾವನೆ ಸಲ್ಲಿಸಿದ್ದನ್ನು ಕೇಂದ್ರ ಕಛೇರಿಯ ತೀಕ್ಷ್ಣವಾಗಿ ಪ್ರತಿಕ್ರಯಿಸಿ ಜಿಲ್ಲಾ ಸಂಖ್ಯಾ ಸಂಗ್ರಹಣಾಧಿಕಾರಿಗಳ ದ್ವಂದ ಹೇಳಿಕೆ (duel statement) ಕುರಿತು ಅವರ ವಿವರಣೆ ಕೇಳಲಾಗಿ, ಆಪಾದಿತ ಸರ್ಕಾರಿ ನೌಕರರಾದ ನೀವು "ನಿರ್ದೇಶಕರಿಗೆ ಒಂದು ಮನವಿ ಪತ್ರವನ್ನು ತುರ್ತಾಗಿ ಕಳುಹಿಸಬೇಕಾಗಿದೆ" ಎಂದು ಅದು ನಿಮ್ಮ ವೈಯಕ್ತಿಕ ವರ್ಗಾವಣೆ ವಿಷಯವೆಂದು ಜಿಲ್ಲಾ ಸಂಖ್ಯಾ ಸಂಗ್ರಹಣಾಧಿಕಾರಿಗಳಿಗೆ ಮಾಹಿತಿ ನೀಡದೆ, ಆತುರವಾಗಿ ಸಹಿ ಮಾಡುವಂತೆ ತಿಳಿಸಿದ್ದರಿಂದ " ನಿಮ್ಮ ಮೇಲೆ ನಂಬಿಕೆ ಇಟ್ಟು ಸಹಿ ಮಾಡಿದ್ದಾಗಿ" ಹಾಗೂ ಆಪಾದಿತನ ಸರ್ಕಾರಿ ನೌಕರರಾದ ನೀವು "ಉತ್ತಮವಾಗಿ ಕಾರ್ಯನಿರ್ವಹಿಸುತ್ತಿದ್ದಾರೆಂದು" ಎಂದು ಬರೆದಿದ್ದನ್ನು ಅವರು ಗಮನಿಸಿರಲಿಲ್ಲವೆಂದು ತಿಳಿಸಿರುತ್ತಾರೆ.

ಆದುದರಿಂದ, ಈ ಪ್ರಕರಣದಲ್ಲಿ ಆಪಾದಿತ ಸರ್ಕಾರಿ ನೌಕರರಾದ ನೀವು ಕರ್ನಾಟಕ ನಾಗರೀಕ ಸೇವಾ (ನಡತೆ) ನಿಯಮಗಳು 1966 ರ ನಿಯಮವನ್ನು ಉಲ್ಲಂಘಿಸಿರುವುದು ಸ್ಪಷ್ಟವಾಗಿ ಕಂಡುಬರುತ್ತದೆ. ಹಾಗೂ ಕಛೇರಿ ಮುಖ್ಯಸ್ಥರಿಗೆ/ಇಲಾಖಾ ಮುಖ್ಯಸ್ಥರಿಗೆ "ನಂಬಿಕೆ ದ್ರೋಹ" ಎಸಗಿರುತ್ತೀರಿ.

**ಆರೋಪ : 2**

ಆರ್ಥಿಕ ಮತ್ತು ಸಾಂಖ್ಯಿಕ ನಿರ್ದೇಶನಾಲಯದ ಆದೇಶದ ಸಂಖ್ಯೆ: ಆಡಳಿತ/661/2007–08, ದಿನಾಂಕ:11–01–2008 ರಲ್ಲಿ ಆಪಾದಿತ ಸರ್ಕಾರಿ ನೌಕರರಾದ ಶ್ರೀ ಆದಿಕುಮಾರ್, ಪ್ರಥಮ ದರ್ಜೆ ಸಹಾಯಕರಾದ ನಿಮ್ಮನ್ನು ಜಿಲ್ಲಾ ಸಂಖ್ಯಾ ಸಂಗ್ರಹಣಾಧಿಕಾರಿಗಳ ಕಚೇರಿ, ರಾಮನಗರ ಜಿಲ್ಲೆ, ಇಲ್ಲಿಗೆ ವರ್ಗಾವಣೆ ಮಾಡಿದ್ದರಿಂದ ಜಿಲ್ಲಾ ಸಂಖ್ಯಾ ಸಂಗ್ರಹಣಾಧಿಕಾರಿಗಳು, ಬೆಂಗಳೂರು ಗ್ರಾಮಾಂತರ ಜಿಲ್ಲೆ, ಇವರ ಕಚೇರಿ ಆದೇಶದ ಸಂಖ್ಯೆ:ಆಡಳಿತ/51/2007–08 ದಿನಾಂಕ: 29.01.2008ರಲ್ಲಿ ದಿನಾಂಕ: 31.01.2008ರಿಂದ ಅನ್ವಯವಾಗುವಂತೆ ನಿಮ್ಮನ್ನು ಕೆಲವು ಬಿಡುಗಡೆಗೊಳಿಸಿ ಪ್ರಭಾರವನ್ನು ವಹಿಸಿಕೊಳ್ಳುವಂತೆ ಸೂಚಿಸಲಾಗಿತ್ತು. ಆದರೆ ನೀವು ಕೆಲವು ಪತ್ರ ವ್ಯವಹಾರಗಳನ್ನು ಮಾತ್ರ ಅವರಿಗೆ ನೀಡಿ, ಸಂಬಂಧಿಸಿದ ಕಡತಗಳನ್ನಾಗಲಿ, ಸೇವಾ ಪುಸ್ತಕಗಳನ್ನಾಗಲಿ ಮತ್ತು ಕಾರ್ಯನಿರ್ವಹಣಾ ವರದಿಗಳನ್ನಾಗಲಿ ಹಾಗೂ ಇನ್ನಿತರ ಯಾವುದೇ ದಾಖಲಾತಿಗಳನ್ನು ನೀಡದೆ ಇದ್ದುದರಿಂದ ನಿಮಗೆ ಅನೇಕ ಸಾರಿ ಮೌಖಿಕವಾಗಿ ತಿಳಿಸಲಾಗಿತ್ತು ಹಾಗೂ ಅಂತಿಮವಾಗಿ ದಿನಾಂಕ 09.06.2008ರಂದು ಜಿಲ್ಲಾ ಸಂಖ್ಯಾ ಸಂಗ್ರಹಣಾಧಿಕಾರಿಗಳು, ಬೆಂಗಳೂರು ಗ್ರಾಮಾಂತರ ಜಿಲ್ಲೆ, ಇವರು ಹೊರಡಿಸಿದ ಜ್ಞಾಪನಕ್ಕೂ ನೀವು ಯಾವುದೇ ಪ್ರತಿಕ್ರಿಯೆ ನೀಡಿರುವುದಿಲ್ಲ. ಆಪಾದಿತ ಸರ್ಕಾರಿ ನೌಕರರಾದ ಶ್ರೀ ಆದಿಕುಮಾರ್, ಪ್ರಥಮ ದರ್ಜೆ ಸಹಾಯಕರಾದ ನೀವು ಬೆಂಗಳೂರು ಗ್ರಾಮಾಂತರ ಜಿಲ್ಲಾ ಸಂಖ್ಯಾ ಸಂಗ್ರಹಣಾಧಿಕಾರಿಗಳ ಕಚೇರಿಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದ ಆಡಳಿತ ಮತ್ತು ಲೆಕ್ಕ ವಿಭಾಗಕ್ಕೆ ಸಂಬಂಧಿಸಿದ ಎಲ್ಲಾ ದಾಖಲಾತಿಗಳನ್ನು ವಹಿಸತಕ್ಕದ್ದು ನಿಮ್ಮ ಜವಾಬ್ದಾರಿಯಾಗಿದ್ದರೂ ಪ್ರಭಾರವನ್ನು ವಹಿಸದೆ ಆ ವಿಭಾಗಕ್ಕೆ ಸಂಬಂಧಿಸಿದ ಕರ್ತವ್ಯ ನಿರ್ವಹಣೆಯಲ್ಲಿ ಅಡೆತಡೆಯನ್ನುಂಟು ಮಾಡಿ ಅತ್ಯಂತ ಬೇಜವಾಬ್ದಾರಿ ರೀತಿಯಲ್ಲಿ ವರ್ತಿಸಿ ಸರ್ಕಾರಿ ನೌಕರರೊಬ್ಬರಿಗೆ ಸಲ್ಲದ ರೀತಿಯಲ್ಲಿ ವರ್ತಿಸಿದ್ದರಿಂದ ನಿಮಗೆ ನೀಡಲಾದ ಕಪಾಟಿನ ಬೀಗವನ್ನು ದಿನಾಂಕ: 23.05.2008 ರಂದು ಬೆಂಗಳೂರು ಗ್ರಾಮಾಂತರ ಜಿಲ್ಲಾ ಸಂಖ್ಯಾ ಸಂಗ್ರಹಣಾಧಿಕಾರಿಗಳು ಮತ್ತು ಸಿಬ್ಬಂದಿಗಳ ಉಪಸ್ಥಿತಿಯಲ್ಲಿ ಬಲವಂತವಾಗಿ ತೆರೆಯಿಸಿ ನೀವು ನಿರ್ವಹಿಸಿದ್ದ/ಬಾಕಿ ಇರಿಸಿಕೊಂಡಿದ್ದ ಪತ್ರ ವ್ಯವಹಾರ, ಸಿಬ್ಬಂದಿಗಳ ಸೇವಾ ಪುಸ್ತಕಗಳು, ಕಡತಗಳನ್ನು ಹಾಗೂ ಇನ್ನಿತರ ದಾಖಲಾತಿಗಳನ್ನು (ಒಟ್ಟು 141) ಆ ಕಚೇರಿ ವಶಕ್ಕೆ ಪಡೆದುಕೊಂಡಿದ್ದರಿಂದ ಈ ಪ್ರಕರಣದಲ್ಲಿ ಆಪಾದಿತ ಸರ್ಕಾರಿ ನೌಕರರಾದ ಶ್ರೀ ಆದಿಕುಮಾರ್, ಪ್ರಥಮ ದರ್ಜೆ ಸಹಾಯಕರಾದ ನೀವು ಕರ್ನಾಟಕ ನಾಗರಿಕ ಸೇವಾ (ನಡತೆ) ನಿಯಮಗಳು 1966 ರ ನಿಯಮ 3 ಅನ್ನು ಸ್ಪಷ್ಟವಾಗಿ ಸರ್ಕಾರಿ ನೌಕರರೊಬ್ಬರಿಗೆ ಸಲ್ಲದ ರೀತಿಯಲ್ಲಿ ವರ್ತಿಸಿರುತ್ತೀರಿ.

**ಆರೋಪ : 3**

ಪ್ರಸ್ತುತ ಅಮಾನತ್ತಿನಲ್ಲಿರುವ ಶ್ರೀ ಆದಿಕುಮಾರ್, ಪ್ರಥಮ ದರ್ಜೆ ಸಹಾಯಕರಾದ ಹಾಗೂ ಆಪಾದಿತ ಸರ್ಕಾರಿ ನೌಕರರಾದ ನೀವು ರಾಮನಗರ ಜಿಲ್ಲಾ ಸಂಖ್ಯಾ ಸಂಗ್ರಹಣಾಧಿಕಾರಿಗಳ ಕಚೇರಿಯಲ್ಲಿ ಅನ್ಯ ಕರ್ತವ್ಯದ ಮೇಲೆ ನಂತರ ದಿನಾಂಕ: 31–01–2008 ರಿಂದ ಅದೇ ಕಚೇರಿಗೆ ವರ್ಗಾವಣೆ ಹೊಂದಿ ಕರ್ತವ್ಯಕ್ಕೆ ವರದಿ ಮಾಡಿಕೊಂಡ ನಂತರ ಕೂಡ ನಿಮ್ಮ "ಅನಧಿಕೃತ ಗೈರುಹಾಜರಾಗಿ ಬೇಜವಾಬ್ದಾರಿತನ, ಕರ್ತವ್ಯಲೋಪ ಮತ್ತು ದುರ್ನಡತೆ ಪ್ರವೃತ್ತಿಯನ್ನು ನಿತಂತರವಾಗಿ ಮುಂದುವರೆಸಿದ್ದರಿಂದ ನಿಮ್ಮ ಮನೆ ವಿಳಾಸಕ್ಕೆ ಜಿಲ್ಲಾ ಸಂಖ್ಯಾ ಸಂಗ್ರಹಣಾದಿಕಾರಿಗಳು, ರಾಮನಗರ ಜಿಲ್ಲೆ, ಇವರು ನೀಡಲಾದ ಜ್ಞಾಪನದ ಸಂಖ್ಯೆ: ಜಿಸಂಸಂ/ರಾಮ/ಆಡಳಿತ/30/07–08, ದಿನಾಂಕ: 15.05.2008 ರಲ್ಲಿ ನಿಮ್ಮ ಅನಧಿಕೃತ ಗೈರುಹಾಜರಾತಿಯಿಂದ ಅವರ ಕಚೇರಿಯ ಸಿಬ್ಬಂದಿಗಳ ಮಾಸಿಕ ವೇತನ ಬಿಲ್ಲು ತಯಾರಿಕೆ ಸಹಿತವಾಗಿ ಆಡಳಿತ ಮತ್ತು ಲೆಕ್ಕ ವಿಭಾಗದ ಕರ್ತವ್ಯ ನಿರ್ವಹಣೆ ಸಂಪೂರ್ಣವಾಗಿ ಸ್ಥಗಿತಗೊಂಡಿರುವುದನ್ನು ವಿವರಿಸಿ, ಕರ್ತವ್ಯಕ್ಕೆ ಹಾಜರಾಗುವಂತೆ ಸೂಚಿಸಲಾಗಿದ್ದರೂ, ನೀವು ಸರ್ಕಾರದ ಕರ್ತವ್ಯಕ್ಕೆ ಅನಧಿಕೃತ ಗೈರುಹಾಜರಾತಿಯನ್ನು ಮುಂದುವರೆಸಿದ್ದರಿಂದ, ಕಚೇರಿ ಕಾರ್ಯಗಳ ನಿರ್ವಹಣೆಗಾಗಿ ನಿಮಗೆ ಕಚೇರಿಯಲ್ಲಿ ನೀಡಲಾದ ಕಪಾಟಿನ ಬೀಗವನ್ನು ದಿನಾಂಕ: 15–05–2008ರಂದು ರಾಮನಗರ ಜಿಲ್ಲಾ ಸಂಖ್ಯಾ ಸಂಗ್ರಹಣಾಧಿಕಾರಿಗಳು ಮತ್ತು ಆ ಕಚೇರಿಯ ಸಿಬ್ಬಂದಿಗಳ ಉಪಸ್ಥಿತಿಯಲ್ಲಿ ತೆರೆಯಿಸಿ, ನೀವು

ನಿರ್ವಹಿಸುತ್ತಿದ್ದ/ಬಾಕಿ ಇರಿಸಿಕೊಂಡಿದ್ದ ಪತ್ರ ವ್ಯವಹಾರ, ಸೇವಾ ಪುಸ್ತಕಗಳು, ಕಡತಗಳನ್ನು ಮತ್ತು ಇನ್ನಿತರ ದಾಖಲಾತಿಗಳನ್ನು ಆ ಕಚೇರಿ ವಶಕ್ಕೆ ಪಡೆದುಕೊಂಡು, ಆ ವಿಭಾಗದ ಕರ್ತವ್ಯ ನಿರ್ವಹಣೆ ಮುಂದುವರೆಸಲಾಗಿದೆಯಾದರೂ, ಜವಾಬ್ದಾರಿಯುತವಾದ ಪ್ರಥಮ ದರ್ಜೆ ಸಹಾಯಕರಾದ ಹುದ್ದೆಯಲ್ಲಿದ್ದ ಸರ್ಕಾರಿ ನೌಕರರಾದ ನೀವು ಅತ್ಯಂತ ಬೇಜವಾಬ್ದಾರಿ ರೀತಿಯ ದುರ್ನಡತೆ ಪ್ರದರ್ಶಿಸಿ, ಕರ್ನಾಟಕ ನಾಗರೀಕ ಸೇವಾ (ನಡತೆ) ನಿಯಮ 3 ಅನ್ನು ಸಂಪೂರ್ಣವಾಗಿ ಉಲ್ಲಂಘಿಸಿರುತ್ತೀರಿ.

**ಆರೋಪ : 4**

ಆಪಾದಿತ ಸರ್ಕಾರಿ ನೌಕರರಾದ (Accused Government Official) ಶ್ರೀ ಆದಿಕುಮಾರ್, ಪ್ರಥಮ ದರ್ಜೆ ಸಹಾಯಕರಾದ ನೀವು ಜಿಲ್ಲಾ ಸಂಖ್ಯಾ ಸಂಗ್ರಹಣಾಧಿಕಾರಿಗಳ ಕಚೇರಿ, ರಾಮನಗರ ಜಿಲ್ಲೆ, ಇಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದ ಅವಧಿಯಲ್ಲಿ ಅದೇ ಕಚೇರಿಯ ದ್ವಿತೀಯ ದರ್ಜೆ ಸಹಾಯಕರಾದ ಶ್ರೀಮತಿ ಆರ್.ಜ್ಯೋತಿ, ಇವರ ಅಕ್ಟೋಬರ್ 2007 ರಿಂದ ಫೆಬ್ರವರಿ 2008 ರವರೆಗಿನ ವೇತನಕ್ಕೆ ಸಂಬಂಧಿಸಿದಂತೆ ಒಟ್ಟು ರೂ. 34,774/– ರ ಬಿಲ್ಲನ್ನು ತಯಾರಿಸಿ, ಜಿಲ್ಲಾ ಸಂಖ್ಯಾ ಸಂಗ್ರಹಣಾಧಿಕಾರಿಗಳಿಂದ ರುಜು ಪಡೆದುಕೊಂಡು ಖಜಾನೆಯಿಂದ ರೂ. 34,774/–ರ ಚೆಕ್ ಸ್ವೀಕೃತಿಯಾದ ನಂತರ, ನಿಯಮಾನುಸಾರ ನಗಧೀಕರಿಸಿ ಸದರಿ ದ್ವಿತೀಯ ದರ್ಜೆ ಸಹಾಯಕರಿಗೆ ರೂ. 32774/– ಗಳನ್ನು ಮಾತ್ರ ವಿತರಿಸಿ, ಆಪಾದಿತ ಸರ್ಕಾರಿ ನೌಕರರಾದ ಶ್ರೀ ಆದಿಕುಮಾರ್, ಪ್ರಥಮ ದರ್ಜೆ ಸಹಾಯಕರಾದ ನೀವು ರೂ. 2000/–ಗಳನ್ನು ಸರ್ಕಾರದ ಹಣವನ್ನು ಸ್ವಂತಕ್ಕಾಗಿ ದುರ್ಬಳಕೆ ಮಾಡಿಕೊಂಡಿದ್ದಲ್ಲದೆ ವೇತನ ಬಟವಾಡೆ ಪುಸ್ತಕದಲ್ಲಿ ರೂ. 34,774/– ಎಂದು ಇದ್ದ ಮೊತ್ತವನ್ನು ರೂ. 32,774/– ಎಂದು ತಿದ್ದಿ, ಮೇಲಾಧಿಕಾರಿಗಳಿಗೆ ದಾರಿ ತಪ್ಪಿಸುವ ಹಾಗೂ ಕಚೇರಿ ಮುಖ್ಯಸ್ಥರಿಗೆ ಮತ್ತು ಸರ್ಕಾರಕ್ಕೆ ಮೋಸ ಮಾಡುವ ದುರುದ್ದೇಶದಿಂದ ಹಣಕಾಸಿನ ವಿಷಯಕ್ಕೆ ಸಂಬಂಧಿಸಿದ ದಾಖಲಾತಿಗಳನ್ನು ನಿಮ್ಮ ಸ್ವಹಿತದೃಷ್ಟಿಯಿಂದ ಬದಲಾಯಿಸಿ ದಂಡಾರ್ಹ ದುರ್ನಡತೆ (criminal misconduct) ಪ್ರದರ್ಶಿಸಿ ನಂಬಿಕೆ ದ್ರೋಹ ಎಸಗಿರುತ್ತೀರಿ.

**ಆರೋಪ : 5**

ಆಪಾದಿತ ಸರ್ಕಾರಿ ನೌಕರರಾದ (Accused Government Official) ಶ್ರೀ ಆದಿಕುಮಾರ್, ಪ್ರಥಮ ದರ್ಜೆ ಸಹಾಯಕರಾದ ನೀವು ಜಿಲ್ಲಾ ಸಂಖ್ಯಾ ಸಂಗ್ರಹಣಾಧಿಕಾರಿಗಳ ಕಚೇರಿಯಲ್ಲಿ ಅನ್ಯ ಕರ್ತವ್ಯದ ಮೇಲೆ ಕರ್ತವ್ಯ ನಿರ್ವಹಿಸುತ್ತಿದ್ದ ಅವಧಿಯಲ್ಲಿ ದಿನಾಂಕ: 01.12.2008 ರಿಂದ ಹೊಸಕೋಟೆ ತಾಲ್ಲೂಕು ಕಚೇರಿಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದ ಕು: ವೀಣಾ ಕುಲಕರ್ಣಿ, ಗಣತಿದಾರರಿಂದ ರೂ. 5600/– (ರೂ. ಐದು ಸಾವಿರದ ಆರು ನೂರುಗಳು ಮಾತ್ರ) ಗಳನ್ನು ಸರ್ಕಾರದ ಕಚೇರಿಯಲ್ಲಿಅನುಷ್ಠಾನಗೊಳಿಸದೆ ಇದ್ದ ಉದ್ದೇಶಕ್ಕಾಗಿ ಪಡೆದುಕೊಂಡಿರುತ್ತೀರೆಂದು, ಸದರಿ ಗಣತಿದಾರರು ದಿನಾಂಕ: 14.05.2008 ರಂದು ಜಿಲ್ಲಾ ಸಂಖ್ಯಾ ಸಂಗ್ರಹಣಾಧಿಕಾರಿಗಳು, ಬೆಂಗಳೂರು ಗ್ರಾಮಾಂತರ ಜಿಲ್ಲೆ, ಇವರಿಗೆ ನಿಮ್ಮ ವಿರುದ್ಧ ದೂರು ನೀಡಿರುತ್ತಾರೆ. ಜಿಲ್ಲಾ ಸಂಖ್ಯಾ ಸಂಗ್ರಹಣಾಧಿಕಾರಿಗಳ ಕಚೇರಿಯಲ್ಲಿ ಪ್ರಥಮ ದರ್ಜೆ ಸಹಾಯಕರಾಗಿ ಜವಾಬ್ದಾರಿಯುತ ಹುದ್ದೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದ ನೀವು ಆಡಳಿತ ಮತ್ತು ಲೆಕ್ಕ ವಿಷಯಕ್ಕೆ ಸಂಬಂಧಿಸಿದಂತೆ ಸಹದ್ಯೋಗಿಗಳಿಗೆ ಸೂಕ್ತ ಮಾರ್ಗದರ್ಶನ ನೀಡುವ ಬದಲಾಗಿ ಸರ್ಕಾರದ ಕಛೇರಿಗಳಲ್ಲಿ ಇನ್ನು ಅನುಷ್ಠಾನಗೊಳಿಸದೇ ಉದ್ದೇಶಕ್ಕಾಗಿ ಎಂದು ಸಹೋದ್ಯೋಗಿಗಳಿಗೆ ತಪ್ಪು ಮಾಹಿತಿ ನೀಡಿ, ಅವರಿಂದ ಹಣ ವಸೂಲು ಮಾಡಿ ಸಹೋದ್ಯೋಗಿಗಳಿಗೆ ಮತ್ತು ಕಚೇರಿ ಮುಖ್ಯಸ್ಥರಿಗೆ ನಂಬಿಕೆ ದ್ರೋಹ ಎಸಗಿ, ಗಂಭೀರ ಸ್ವರೂಪದ ದುರ್ನಡತೆ ಎಸಗಿರುತ್ತೀರೆಂದು ಸ್ಪಷ್ಟವಾಗಿ ಕಂಡು ಬರುತ್ತದೆ.

**ಆರೋಪ:6**

ಸದರಿ ಆಪಾದಿತ ಸರ್ಕಾರಿ ನೌಕರರಾದ (Accused Government Official) ಶ್ರೀ ಆದಿಕುಮಾರ್, ಪ್ರಥಮ ದರ್ಜೆ ಸಹಾಯಕರಾದ ನೀವು ಜಿಲ್ಲಾ ಸಂಖ್ಯಾ ಸಂಗ್ರಹಣಾಧಿಕಾರಿಗಳ ಕಛೇರಿ, ರಾಮನಗರ ಜಿಲ್ಲೆ, ಇಲ್ಲಿ ನಿಯೋಜನೆ ಮೇಲೆ ಕರ್ತವ್ಯ ನಿರ್ವಸುತ್ತಿದ್ದಾಗ 4 ನೇ ಆರೋಪದಲ್ಲಿ ವಿವರಿಸಲಾದ ಆ ಕ್ರಮದ ವಿಧಾನದಂತೆ ಮತ್ತೊಂದು ವಂಚನೆ ಪ್ರಕರಣವನ್ನು ಎಸಗಿರುವ ಕುರಿತು ಕುಮಾರಿ ಪಿ.ಮಂಜು, ಗಣತಿದಾರರು, ತಾಲ್ಲೂಕು ಕಛೇರಿ, ರಾಮನಗರ ಜಿಲ್ಲೆ, ಇವರು ದಿನಾಂಕ: 26.06.2008 ರಂದು ನಿಮ್ಮ ವಿರುದ್ದ ನೀಡಿದ ದೂರಿನಲ್ಲಿ ವಿವರಿಸುತ್ತಾ "ಶ್ರೀ ಆದಿಕುಮಾರ, ಪ್ರಥಮ ದರ್ಜೆ ಸಹಾಯಕರು, ಇವರು ಡಿ.ಸಿ.ಪಿ.ಎಸ್. ಹಣ ರೂ.2500/– ಗಳನ್ನು ಪಡೆದು ಖಜಾನೆಗೆ ಸಂದಾಯ ಮಾಡಬೇಕೆಂದು ತಿಳಿಸಿದ್ದು, ಅವರಿಗೆ ನಾನು ನವೆಂಬರ್ 2007ರ ಕೊನೆ ದಿನದಂದು ರೂ.2500/– ಗಳನ್ನು ಕೊಟ್ಟಿರುವುದಾಗಿ, ಅದಕ್ಕೆ ಅವರು ನನಗೆ ಯಾವುದೇ ರೀತಿ ಸ್ವೀಕೃತಿಯನ್ನು ನೀಡಿರುವುದಿಲ್ಲ" ಎಂದು ಗಂಭೀರ ಸ್ವರೂಪದ ಆರೋಪ ಮಾಡಿದ್ದನ್ನು ಪರಿಗಣಿಸಲಾಗಿ ಆಪಾದಿತ ಸರ್ಕಾರಿ ನೌಕರರಾದ ನೀವು ಸರ್ಕಾರಿ ನೌಕರರೊಬ್ಬರಿಗೆ ಸಲ್ಲದ ರೀತಿಯಲ್ಲಿ ವರ್ತಿಸಿ ನಿಮ್ಮ ಸಹೋದ್ಯೋಗಿಗಳಿಗೆ ಹಾಗೂ

ಕಛೇರಿ ಮುಖ್ಯಸ್ಥರಿಗೆ ಹಾಗೂ ಸರ್ಕಾರಕ್ಕೆ ನಂಬಿಕೆ ದ್ರೋಹ ಎಸಗಿ ಕರ್ನಾಟಕ ನಾಗರೀಕ ಸೇವೆ (ನಡತೆ) ನಿಯಮಗಳು 1966 ರ ನಿಯಮ 3 ನ್ನು ಉಲ್ಲಂಘಿಸಿರುತ್ತೀರಿ.

**ಆರೋಪ: 7**

ಸದರಿ ಆಪಾದಿತ ಸರ್ಕಾರಿ ನೌಕರರಾದ ಹಾಗೂ ಪ್ರಸ್ತುತ ಅಮಾನತ್ತಿನಲ್ಲಿರುವ ಶ್ರೀ ಆದಿಕುಮಾರ, ಪ್ರಥಮ ದರ್ಜೆ ಸಹಾಯಕರಾದ ನೀವು ದಿನಾಂಕ:11/02/2008 ರಂದು ಸಲ್ಲಿಸಿದ ಮನವಿಯಲ್ಲಿ "ದಿನಾಂಕ:31.01.2008 ರಂದು ಕೇಂದ್ರ ಕಛೇರಿಯಿಂದ ಬಿಡುಗಡೆ ಹೊಂದಿ ಸೇರಿಕೆ ಕಾಲವನ್ನು ಉಪಯೋಗಿಸಿಕೊಂಡು ದಿನಾಂಕ: 11.02.2008 ರಂದು ಪೂರ್ವಾಹ್ನ ಜಿಲ್ಲಾ ಸಂಖ್ಯಾ ಸಂಗ್ರಹಣಾದಿಕಾರಿಗಳ ಕಛೇರಿ, ರಾಮನಗರ ಜಿಲ್ಲೆ ಇಲ್ಲಿ ಕರ್ತವ್ಯಕ್ಕೆ ವರದಿ ಮಾಡಿಕೊಳ್ಳುತ್ತಿದ್ದೇನೆ" ಎಂದು ನಮೂದಿಸಿ ವರದಿ ಮಾಡಿಕೊಂಡಿದ್ದು, ನಂತರ ಈ ಕೆಳಗೆ ತಿಳಿಸಲಾದ ದಿನಾಂಕಗಳಂದು ಕರ್ತವ್ಯಕ್ಕೆ ಅನಧಿಕೃತ ಗೈರುಹಾಜರಾಗಿರುತ್ತೀರಿ:–

1) ದಿನಾಂಕ 01.05.2008 ರಿಂದ 31.05.2008

2) ದಿನಾಂಕ 01.06.2008 ರಿಂದ 31.06.2008

ದಿನಾಂಕ 01.07.2008 ರಲ್ಲಿ ನೀವು ಕರ್ತವ್ಯಕ್ಕೆ ನಿಗಧಿತ ಸಮಯಕ್ಕೆ ಹಾಜರಾಗದೆ ಇದ್ದುದಕ್ಕಾಗಿ ಅಥವಾ ಅನಧಿಕೃತ ಗೈರುಹಾಜರಾಗಿದ್ದುದನ್ನು ಪರಿಗಣಿಸಿ, ಆ ದಿನದ ನಿಮ್ಮ ಹಾಜರಾತಿಯನ್ನು (X) ಎಂದು ಹಾಜರಾತಿ ಪುಸ್ತಕದಲ್ಲಿ ಗುರುತಿಸಲಾಗಿದ್ದರೂ, ಕಛೇರಿ ಮುಖ್ಯಸ್ಥರ ಅನುಮತಿ ಪಡೆಯದೆ ಅಥವಾ ಅವರಿಂದ ಧೃಡೀಕರಿಸದೆ ದಿನಾಂಕ:01.07.2008 ರಂದು (X) ಎಂದು ಗುರುತಿಸಲಾಗಿದ್ದರೂ, ಅದರ ಕೆಳಗೆ ಸಹಿ ಮಾಡಿ ಗಂಭೀರ ಸ್ವರೂಪದ ಲೋಪ ದೋಷ ಎಸಗಿ ಸರ್ಕಾರಿ ನೌಕರರೊಬ್ಬರಿಗೆ ಸಲ್ಲದ ರೀತಿಯಲ್ಲಿ ವರ್ತಿಸಿರುತ್ತೀರಿ. ದಿನಾಂಕ: 08.03.1984 ರಂದು ದ್ವಿತೀಯ ದರ್ಜೆ ಸಹಾಯಕರಾಗಿ ಸರ್ಕಾರಿ ಸೇವೆಗೆ ಸೇರಿದ ನೀವು ಜಿಲ್ಲಾ ಸಂಖ್ಯಾ ಸಂಗ್ರಹಣಾಧಿಕಾರಿಗಳ ಕಛೇರಿ, ಮೈಸೂರು ನಂತರ ಕೇಂದ್ರ ಕಛೇರಿಯಲ್ಲಿ ಹಲವಾರು ವರ್ಷಗಳ ಸೇವೆ ಸಲ್ಲಿಸಿದ್ದರೂ ಹಾಗೂ ಹೊಸದಾಗಿ ಸರ್ಕಾರಿ ಸೇವೆಗೆ ಸೇರಿದ ಸಿಬ್ಬಂದಿಗಳಿಗೆ ಮಾದರಿಯಾಗಿ (exemplary) ವರ್ತಿಸಿ ಅಂತಹವರಿಗೆ ಸರ್ಕಾರದ ಸೇವೆಗೆ ಸಂಬಂಧಿಸಿದಂತೆ, ಮಾರ್ಗದರ್ಶನ ನೀಡಬಹುದಾದ ನೀವು 24 ವರ್ಷಗಳ ಸೇವೆ ನಂತರವೂ ಅನಧಿಕೃತ ಗೈರುಹಾಜರಾಗುವ ಪ್ರವೃತ್ತಿಯನ್ನು ನಿರಂತರವಾಗಿ ಮುಂದುವರೆಸಿ, ಅತ್ಯಂತ ಬೇಜವಾಬ್ದಾರಿಯ ನಡತೆಯನ್ನು ಪ್ರದರ್ಶಿಸಿ ಕರ್ನಾಟಕ ನಾಗರೀಕ ಸೇವಾ (ನಡತೆ) ನಿಯಮಗಳು 1966 ನಿಮಯ 3 ಕ್ಕೆ ವಿರುದ್ದವಾಗಿ ವರ್ತಿಸಿರುತ್ತೀರಿ.

**ಆರೋಪ:8**

ಪ್ರಸ್ತುತ ಅಮಾನತ್ತಿನಲ್ಲಿರುವ ಶ್ರೀ ಆದಿಕುಮಾರ್, ಪ್ರಥಮ ದರ್ಜೆ ಸಹಾಯಕರಾದ ನೀವು ಬೆಂಗಳೂರು ಗ್ರಾಮಾಂತರ ಜಿಲ್ಲಾ ಸಂಖ್ಯಾ ಸಂಗ್ರಹಣಾಧಿಕಾರಿಗಳ ಕಛೇರಿಯಲ್ಲಿ ಅನ್ಯ ಕರ್ತವ್ಯದ ಮೇಲೆ ಕರ್ತವ್ಯ ನಿರ್ವಹಿಸುತ್ತಿದ್ದ ಅವಧಿಯಲ್ಲಿ ಈ ಕೆಳಗೆ ತಿಳಿಸಲಾದ ಅವಧಿಯಲ್ಲಿ ಕರ್ತವ್ಯಕ್ಕೆ ಅನಧಿಕೃತ ಗೈರುಹಾಜರಾಗಿರುತ್ತೀರಿ:–

ದಿನಾಂಕ 14.05.2007 ರಿಂದ 24.05.2007. ಈ ಬಗ್ಗೆ ನಿಮಗೆ ದಿನಾಂಕ:18.05.2007 ರಂದು ಜ್ಞಾಪನ ನೀಡಲಾಗಿದ್ದರೂ ಅದಕ್ಕೆ ವಿವರಣೆ ಸಲ್ಲಿಸಿರುವುದಿಲ್ಲ. ಸ್ವತ: ನೀವೇ ಕಾರ್ಯನಿರ್ವಾಹಕರಾಗಿದ್ದರಿಂದ, ಅನ್ಯ ಕರ್ತವ್ಯದ ಮೇಲಿದ್ದ ನಿಮ್ಮ ಹಾಜರಾತಿ ಕುರಿತು ಪ್ರತಿ ತಿಂಗಳು ಕೇಂದ್ರ ಕಛೇರಿಗೆ ವೇತನ ನೀಡುವುದಕ್ಕಾಗಿ ಮಾಹಿತಿ ನೀಡಬೇಕಾಗಿದ್ದರೂ, ಉದ್ದೇಶಪೂರ್ವಕವಾಗಿ ಸಲ್ಲಿಸಿರುವುದಿಲ್ಲ. ಅದೇ ಅವಧಿಯಲ್ಲಿ ನಿಮ್ಮನ್ನು ನಂಜನಗೂಡು ಪೋಲೀಸ್ ಠಾಣೆಯಲ್ಲಿ ಇಟ್ಟಿರುವುದಾಗಿ ಮೌಖಿಕವಾಗಿ ಜಿಲ್ಲಾ ಸಂಖ್ಯಾ ಸಂಗ್ರಹಣಾಧಿಕಾರಿಗಳ ಕಛೇರಿಗೆ ತಿಳಿಸಿದ್ದರಿಂದ ಕರ್ತವ್ಯಕ್ಕೆ ಗೈರುಹಾಜರಾಗಿ ಸರ್ಕಾರಿ ನೌಕರರಿಗೆ ಸಲ್ಲದ ರೀತಿಯಲ್ಲಿ ವರ್ತಿಸಿರುತ್ತೀರಿ.

**ಆರೋಪ: 9**

ಆಗಸ್ಟ್ 2007 ರಲ್ಲಿನ ನಿಮ್ಮ ಅನಧಿಕೃತ ಗೈರುಹಾಜರಾತಿಯನ್ನು ಮುಚ್ಚಿ ಹಾಕಲು, ಸ್ವತ: ಜವಾಬ್ದಾರಿಯುತ ಪ್ರಥಮ ದರ್ಜೆ ಸಹಾಯಕ ಹುದ್ದೆಯಲ್ಲಿದ್ದ ನೀವು ನಿಮಗೆ ವಹಿಸಲಾದ ಸರ್ಕಾರದ ದಾಖಲಾತಿಗಳನ್ನು ಸುರಕ್ಷಿತವಾಗಿಡುವ ಬದಲಾಗಿ ಆಗಸ್ಟ್ 2007ರ ಹಾಜರಾತಿ ಪುಸ್ತಕದ ಭಾಗವನ್ನು ಹರಿದು ಹಾಕಿ ಸರ್ಕಾರಿ ನೌಕರರೊಬ್ಬರಿಗೆ ಸಲ್ಲದ ರೀತಿಯಲ್ಲಿ ವರ್ತಿಸಿರುತ್ತೀರಿ.

**ಆರೋಪ: 10**

ಪ್ರಸ್ತುತ ಅಮಾನತ್ತಿನಲ್ಲಿದ್ದ ಸರ್ಕಾರಿ ನೌಕರರಾದ ನೀವು ದಿನಾಂಕ: 14.05.2007 ರಿಂದ 24.05.2007ರ ವರೆಗೆ ಅನಧಿಕೃತ ಗೈರುಹಾಜರಾಗಿದ್ದರಿಂದ ನಿಮಗೆ ವಹಿಸಲಾದ ಆಡಳಿತ ಮತ್ತು ಲೆಕ್ಕ ವಿಭಾಗದ ಕರ್ತವ್ಯಗಳ ನಿರ್ವಹಣೆಯಲ್ಲಿ ಹಾಗೂ ವೈಯಕ್ತಿಕ ಸೇವಾ ವಿಷಯದಲ್ಲಿ ತಡೆ ಉಂಟು ಮಾಡಿ, ಅತ್ಯಂತ ಬೇಜವಾಬ್ದಾರಿಯನ್ನಾಗಿ ವರ್ತಿಸಿರುತ್ತೀರಿ.

**ಆರೋಪ: 11**

ಪ್ರಸ್ತುತ ಅಮಾನತ್ತಿನಲ್ಲಿದ್ದ ಸರ್ಕಾರಿ ನೌಕರರಾದ ನೀವು ಜಿಲ್ಲಾ ಸಂಖ್ಯಾ ಸಂಗ್ರಹಣಾಧಿಕಾರಿಗಳ ಕಚೇರಿ, ಬೆಂಗಳೂರು ಗ್ರಾಮಾಂತರ ಜಿಲ್ಲೆ ಇಲ್ಲಿ ನಿಯೋಜನೆ ಮೇಲೆ ಕರ್ತವ್ಯ ನಿರ್ವಹಿಸುತ್ತಿದ್ದ ಅವಧಿಯಲ್ಲಿ ಈ ಕೆಳಗೆ ತಿಳಿಸಲಾದ ಸರ್ಕಾರದ ಹಣವನ್ನು ದುರುಪಯೋಗಪಡಿಸಿಕೊಂಡಿರುತ್ತೀರಿ:–

1. ಶ್ರೀ ಕೆ.ಸಿದ್ದರಾಜು, ಸಹಾಯಕ ನಿರ್ದೇಶಕರು, ಇವರ ಪ್ರವಾಸದ ಬಿಲ್ಲು ಹಣ:

ಅ) ಮೇ 2007 : ರೂ.374.00

ಆ) ಜೂನ್ 2007 : ರೂ.246.00

ಇ) ಜುಲೈ 2007 : ರೂ. 164.00

ಈ) ಆಗಸ್ಟ್ 2007 : ರೂ.741.00

2) ತಾಲ್ಲೂಕು ಯೋಜನಾ ಘಟಕಕ್ಕೆ ವರ್ಗಾವಣೆ ಆದೇಶದಲ್ಲಿದ್ದ ಶ್ರೀ ಕೆ.ಸಿದ್ದರಾಜು, ಸಹಾಯಕ ನಿರ್ದೇಶಕರು ಇವರಿಗೆ ಮಂಜೂರಾದ ಹಬ್ಬದ ಮುಂಗಡ ರೂ.2000/– ಗಳನ್ನು ಸರ್ಕಾರಕ್ಕೆ ಜಮಾ ಮಾಡುವಂತೆ ಜವಾಬ್ದಾರಿಯುತ ಪ್ರಥಮ ದರ್ಜೆ ಸಹಾಯಕರಾದ ಹಾಗೂ ಆಡಳಿತ ಮತ್ತು ಲೆಕ್ಕ ವಿಭಾಗದ ಕಾರ್ಯನಿರ್ವಾಹಕರಾದ ನಿಮಗೆ ಅವರು ನೀಡಿದ್ದನ್ನು ಸರ್ಕಾರಕ್ಕೆ ಜಮಾ ಮಾಡದೆ, ಈ ಹಣವನ್ನು ದುರುಪಯೋಗ ಪಡಿಸಿಕೊಂಡಿರುತ್ತೀರಿ.

3) ಈ ನಿರ್ದೇಶನಾಲಯದ ಆದೇಶದ ದಿನಾಂಕ: 29.06.2006 ರನ್ವಯ ಬೆಂಗಳೂರು ಗ್ರಾಮಾಂತರ ಜಿಲ್ಲಾ ಸಂಖ್ಯಾ ಸಂಗ್ರಹಣಾಧಿಕಾರಿಗಳ ಕಚೇರಿಯಲ್ಲಿ ನಿಯೋಜನೆ ಮೇಲೆ ಕರ್ತವ್ಯ ನಿರ್ವಹಿಸುತ್ತಿದ್ದ ಅವಧಿಯಲ್ಲಿ ಸರ್ಕಾರದ ಆದೇಶದ ಸಂಖ್ಯೆ: ಪಿಡಿ/25/ಎಸ್ ಆರ್ ಪಿ/06, ದಿನಾಂಕ: 27.07.2006 ರಲ್ಲಿ ಮಂಜೂರಾದ ತುಟ್ಟಿಭತ್ಯೆ ಬಾಕಿಯನ್ನು ಈ ಕೆಳಗೆ ತಿಳಿಸಲಾದ ಅಧಿಕಾರಿಗೆ ವಿತರಿಸದೇ ಸರ್ಕಾರದ ಹಣವನ್ನು ದುರುಪಯೋಗ ಪಡಿಸಿಕೊಂಡಿರುತ್ತೀರಿ.

1) ಸಹಾಯಕ ನಿರ್ದೇಶಕರಾಗಿದ್ದ : ರೂ. 879.00
ಶ್ರೀ ಕೆ. ಸಿದ್ದರಾಜು

2) ಸ್ವತ: ಕಛೇರಿ ಮುಖ್ಯಸ್ಥರಾಗಿದ್ದ : ರೂ. 505.00

ಶ್ರೀ ಬಿ.ಶ್ರೀನಿವಾಸಾಚಾರ್, ಜಿಲ್ಲಾ ಸಂಖ್ಯಾ ಸಂಗ್ರಹಣಾಧಿಕಾರಿಗಳು ಇವರ ನವೆಂಬರ್ ತಿಂಗಳಿನ ವೇತನ ವ್ಯತ್ಯಾಸ (ಈ ಹಣವನ್ನು ದುರುಪಯೋಗಪಡಿಸಿಕೊಳ್ಳುವ ಉದ್ದೇಶದಿಂದ ನೀವು ಸ್ವತ: ತಯಾರಿಸಿದ ಬಿಲ್ಲಿನಲ್ಲಿ ಯಾವ ವಿಷಯ ಎಂದು ನಮೂದಿಸಿರುವುದಿಲ್ಲ)

**ಆರೋಪ:12**

ಪ್ರಸ್ತುತ ಅಮಾನತ್ತಿನಲ್ಲಿರುವ ಪ್ರಥಮ ದರ್ಜೆ ಸಹಾಯಕರಾದ ಶ್ರೀ ಆದಿಕುಮಾರ್, ಆದ ನೀವು 2004 ನೇ ಸಾಲಿನಲ್ಲಿ ಕೇಂದ್ರ ಕಛೇರಿಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದ ಅವಧಿಯಲ್ಲಿ ಶ್ರೀಮತಿ ಗಿರಿಯಮ್ಮ, ಗಣತಿದಾರರಿಗೆ ಸಂಬಂಧಿಸಿದ ಕಡತವನ್ನು ಪರಿಶೀಲಿಸುವಲ್ಲಿ ಎಸಗಿದ ಲೋಪದೋಷಗಳ ಕುರಿತು ನಿಮಗೆ ನೀಡಲಾದ ಜ್ಞಾಪನದ ದಿನಾಂಕ:05.10.2007 ಕ್ಕೆ ಸಂಬಂಧಿಸಿದಂತೆ, ದಿನಾಂಕ: 29.10.2007 ರಂದು ನೀಡಿದ ನಿಮ್ಮ ವಿವರಣೆಯಲ್ಲಿ "ನೀವು ಯಾವುದೇ ಲೋಪದೋಷಗಳನ್ನು ಎಸಗದೆ ಇದ್ದಾಗಲೂ, ನಿಮ್ಮ ಮೇಲಿನ ವೈಯಕ್ತಿಕ ದ್ವೇಷ ಮತ್ತು ಸೇಡಿನಿಂದ ಆ ಜ್ಞಾಪನವನ್ನು ನಿಮಗೆ ನೀಡುವಂತೆ ಮಾಡಿದ್ದರಿಂದ ನಿಮಗೆ ಮಾನಸಿಕ ಹಿಂಸೆಯಾಗಿದ್ದು ನಿಮ್ಮ ಕುಟುಂಬವರೆಲ್ಲರೊಂದಿಗೆ ಆತ್ಮಹತ್ಯೆ ಮಾಡಿಕೊಳ್ಳುತ್ತೇವೆಂದು ಹಾಗೂ ಸದರಿ ಅವರಿಗೆ ಮಾನಸಿಕ ಹಿಂಸೆ ನೀಡುತ್ತಿರುವವರೇ ನಿಮ್ಮ ಆತ್ಮಹತ್ಯೆಗೆ ಕಾರಣರಾಗುತ್ತೀರೆಂದು ನಿಮಗೆ ಜ್ಞಾಪನ ನೀಡಿದ ಇಲಾಖಾ ಮುಖ್ಯಸ್ಥರಿಗೆ ಹೆದರಿಸುವ (Black mail) ನಿಮ್ಮ ವರ್ತನೆಯು ಸರ್ಕಾರಿ ನೌಕರರೊಬ್ಬರಿಗೆ ಸಲ್ಲದ ರೀತಿಯಲ್ಲಿರುತ್ತದೆ. ಕೇಂದ್ರ ಕಛೇರಿಯಿಂದ ನಿಮ್ಮನ್ನು ಜಿಲ್ಲಾ ಸಂಖ್ಯಾ ಸಂಗ್ರಹಣಾಧಿಕಾರಿಗಳ ಕಛೇರಿಗೆ ನಿಯೋಜಿಸಿದ/ವರ್ಗಾವಣೆ ನಂತರವೂ ನಿಮ್ಮ ಅನಧಿಕೃತ ಗೈರುಹಾಜರಾತಿ, ಕರ್ತವ್ಯಲೋಪ, ದುರ್ನಡತೆ, ಸರ್ಕಾರದ ಹಣದ ದುರುಪಯೋಗ ನಿರಂತರವಾಗಿ ಆ ಕಚೇರಿಯಲ್ಲಿಯೂ ಮುಂದುವರೆದಿದ್ದರಿಂದ ನಿಮಗೆ ಹಲವಾರು ಜ್ಞಾಪನಗಳನ್ನು ನೀಡುವ, ನಿಮ್ಮನ್ನು ಸೇವೆಯಿಂದ ಅಮಾನತ್ತುಗೊಳಿಸುವಂತಹ ಪರಿಸ್ಥಿತಿಗೆ ಸ್ವತ: ನೀವೇ ಕಾರಣರಾಗಿದ್ದರಿಂದ, ಈ ಎಲ್ಲಾ ಕಾರಣಗಳಿಂದಾಗಿ ಮಾನಸಿಕ ಹಿಂಸೆ ಎಂದು ಪರಿಗಣಿಸಿಕೊಂಡು ಆತ್ಮಹತ್ಯೆ ಮಾಡಿಕೊಂಡಿದ್ದಲ್ಲಿ ಅದು ನಿಮ್ಮ Cognizable Offence ಎಂದು (ತಕ್ಷಣ ಪೋಲೀಸಿನವರು ದಸ್ತಗಿರಿ ಮಾಡಬಹುದಾದ ಅಪರಾಧ) ಪರಿಗಣಿಸುವಂತೆ ಸೂಚಿಸಲಾಗಿತ್ತು ಹಾಗೂ ಶ್ರೀಮತಿ ಗಿರಿಯಮ್ಮ, ಗಣತಿದಾರರು ಇವರ ಖಾಯಂಪೂರ್ವ ಅವಧಿಯನ್ನು ಘೋಷಿಸುವ ಪ್ರಕರಣಕ್ಕೆ ಸಂಬಂಧಿಸಿದಂತೆ ನಿಮಗೆ ನೀಡಲಾದ ಜ್ಞಾಪನಕ್ಕೆ ವಿವರಣೆ ನೀಡುವಂತೆ ಸೂಚಿಸಲಾಗಿದ್ದರೂ, ನಿಮ್ಮ ವಿವರಣೆ ನೀಡಿರುವುದಿಲ್ಲ. ಆಪಾದಿತ ಸರ್ಕಾರಿ ನೌಕರರಾದ ಶ್ರೀ ಆದಿಕುಮಾರ್, ಪ್ರಥಮ ದರ್ಜೆ ಸಹಾಯಕರು (ಪ್ರಸ್ತುತ ಅಮಾನತ್ತಿನಲ್ಲಿ) ಆದ ನಿಮ್ಮ ವಿರುದ್ದದ ಮೇಲೆ ತಿಳಿಸಲಾದ ಎಲ್ಲಾ ಆರೋಪಗಳಿಗೆ ಸಂಬಂಧಿಸಿದಂತೆ ವಿಶೇಷವಾಗಿ ರಾಮನಗರ ಜಿಲ್ಲಾ ಸಂಖ್ಯಾ

ಸಂಗ್ರಹಣಾಧಿಕಾರಿಗಳ ಕಚೇರಿಯಲ್ಲಿ ಕುಮಾರಿ ಆರ್.ಜ್ಯೋತಿ, ದ್ವಿತೀಯ ದರ್ಜೆ ಸಹಾಯಕರಿಗೆ ವೇತನ ನೀಡುವ ವಿಷಯದಲ್ಲಿ ದಾಖಲಾತಿಗಳನ್ನು ನಿಮ್ಮ ಸ್ವಹಿತ ದೃಷ್ಟಿಯಿಂದ ದುರದ್ದೇಶಪೂರ್ವಕವಾಗಿ ಬದಲಾಯಿಸಿ (tampering of government records) ಗಂಭೀರ ಸ್ವರೂಪದ ದುರ್ನಡತೆ ಪ್ರದರ್ಶಿಸಿ (criminal misconduct) ಸರ್ಕಾರಕ್ಕೆ ನಂಬಿಕೆ ದ್ರೋಹ ಎಸಗಿರುವುದರಿಂದ ಹಾಗೂ ಜಿಲ್ಲಾ ಸಂಖ್ಯಾ ಸಂಗ್ರಹಣಾದಿಕಾರಿಗಳ ಕಛೇರಿ, ರಾಮನಗರ ಮತ್ತು ಬೆಂಗಳೂರು ಗ್ರಾಮಾಂತರ ಜಿಲ್ಲೆ, ಇಲ್ಲಿ ನಿರಂತರವಾಗಿ ಅಧಿಕೃತ ಗೈರುಹಾಜರಾಗಿ, ಕರ್ತವ್ಯಲೋಪ, ಬೇಜವಾಬ್ದಾರಿತನ ಮತ್ತು ದುರ್ನಡತೆ ಪ್ರದರ್ಶಿಸಿ ಕರ್ನಾಟಕ ನಾಗರೀಕ ಸೇವಾ (ನಡತೆ) ನಿಮಗಳು 1986 ರ ನಿಯಮ –3 ಅನ್ನು ಉಲ್ಲಂಘಿಸಿದ್ದರಿಂದ ನಿಮ್ಮ ವಿರುದ್ದ ಇಲಾಖಾ ವಿಚಾರಣೆ ಏರ್ಪಡಿಸಲು ಉದ್ದೇಶಿಸಲಾಗಿದೆ.

5. ಸದರಿ ಆಪಾದಿತ ( AGO UAccused Government Official) ಸರ್ಕಾರಿ ನೌಕರರಾದ ಶ್ರೀ ಆದಿಕುಮಾರ, ಪ್ರಥಮ ದರ್ಜೆ ಸಹಾಯಕರು, ದಿನಾಂಕ: 13.10.2008 ರಂದು ಮೇಲೆ ವಿವರಿಸಲಾದ ಹಾಗೂ ಉಲ್ಲೇಖ (5) ರಲ್ಲಿನ ಕಾರಣ ಕೇಳುವ ಜ್ಞಾಪನ ಸ್ವೀಕೃತಿಸಿದ ನಂತರ, ಉಲ್ಲೇಖ(6) ರಲ್ಲಿನ ಕಾರಣ ಕೇಳುವ ಜ್ಞಾಪನ ಸ್ವೀಕರಿಸಿದ ನಂತರ, ಉಲ್ಲೇಖ (6) ರಲ್ಲಿನ ದಿನಾಂಕ: 27/10/08 ರಂದು ಸಲ್ಲಿಸಿದ ಅವರ ಮನವಿಯಲ್ಲಿ (ಅನುಬಂಧ–ಬಿ) ಅವರ ವಿರುದ್ದ ಹೊರಡಿಸಲಾದ 12 ಆರೋಪಗಳನ್ನೊಳಗೊಂಡ ಕಾರಣ ಕೇಳುವ ಜ್ಞಾಪನಕ್ಕೆ ಉತ್ತರಿಸಲು ದಾಖಲಾತಿಗಳನ್ನು ಸಂಬಂಧಿಸಿದ ಕಛೇರಿಗಳಿಂದ ಪಡೆದು ಪರಿಶೀಲಿಸಬೇಕಾಗಿರುವುದರಿಂದ, ಹಾಗೂ ಈ ಬಗ್ಗೆ ಕಾನೂನು ತಜ್ಞರಿಂದ ಸಲಹೆ ಪಡೆಯಬೇಕಾಗಿದ್ದರಿಂದ ಅವರಿಗೆ ಈಗಾಗಲೇ ನೀಡಲಾದ 15 ದಿನಗಳ ನಂತರ 1 ತಿಂಗಳು ಕಾಲಾವಕಾಶ ನೀಡಬೇಕೆಂದು ಸಲ್ಲಿಸಿದ ಕೋರಿಕೆಯನ್ನು ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು, 1957 ರ ನಿಮ –11 ರ ಉಪ ನಿಯಮಗಳ ಅನ್ವಯ ಹಾಗೂ ಅದೇ ನಿಮಗಳ ನಿಯಮ: 11(4) ರ ಅನ್ವಯ ಪರಿಶೀಲಿಸಿ ಆರೋಪಿತ ಸರ್ಕಾರಿ ನೌಕರನಿಗೆ (AGO) "ಆರೋಪ ಪಟ್ಟಿ" ಜಾರಿ ಮಾಡಿದ ನಂತರ ನಿಗದಿ ಪಡಿಸಲಾದ ಅವಧಿ ಒಳಗಾಗಿ ಆತನನ್ನು ರಕ್ಷಿಸಿಕೊಳ್ಳಬೇಕಾದ ಲಿಖಿತ ಹೇಳಿಕೆಯನ್ನು ನಿಗದಿತ ಅವಧಿ ಒಳಗಾಗಿ ಸಲ್ಲಿಸದೇ ಇದ್ದಲ್ಲಿ, ಆತನು ಏನೂ ಹೇಳುವುದಿಲ್ಲವೆಂದು ಪರಿಗಣಿಸಿ, ಇಲಾಖಾ ವಿಚಾರಣೆ ಏರ್ಪಡಿಸಬಹುದಾದ್ದರಿಂದ, ಕಾಲಾವಕಾಶ ನೀಡುವಂತೆ ಸಲ್ಲಿಸಲಾಗಿದ್ದ ಸದರಿ ಅವರ ಕೋರಿಕೆಯನ್ನು ತಿರಸ್ಕರಿಸಬಹುದಾಗಿತ್ತಾದರೂ, ನೈಸರ್ಗಿಕ ನ್ಯಾಯದ ದೃಷ್ಟಿಯಿಂದ (in the interest of natural justice) ಅವರ ಲಿಖಿತ ಹೇಳಿಕೆ ಸಲ್ಲಿಸಲು ಈ ನಿರ್ದೇಶನಾಲಯದ ಇದೇ ಕ್ರಮಾಂಕದ ಜ್ಞಾಪನದ ದಿನಾಂಕ: 7.11.2008 ರಲ್ಲಿ **(ಅನುಬಂಧ–ಸಿ)** ಅವರಿಗೆ 15 ದಿನಗಳ ಒಳಗಾಗಿ ಕಾಲಾವಕಾಶ ನೀಡಲಾಗಿತ್ತು. ಹಾಗೂ "ಸದರಿ ಪ್ರಥಮ ದರ್ಜೆ ಸಹಾಯಕರ ವಿರುದ್ದದ ಆರೋಪಗಳಿಗೆ ಸಂಬಂಧಿಸಿದ ದಾಖಲಾತಿಗಳನ್ನು ನಾಶ ಪಡಿಸಬಾರದೆಂಬ ಉದ್ದೇಶದಿಂದ ಸದರಿ ಆಪಾದಿತ ಸರ್ಕಾರಿ ನೌಕರರನ್ನು ಸರ್ಕಾರದ ಸೇವೆಯಿಂದ ಅಮಾನತ್ತುಗೊಳಿಸಲಾಗಿದ್ದರಿಂದ, ನಿಯಮಗಳ ಅನ್ವಯ, ಯಾವುದೇ ದಾಖಲಾತಿಗಳನ್ನು ಸಂಬಂಧಿಸಿದ ಕಛೇರಿಗಳಿಂದ ಅವರಿಗೆ ಈ ಹಂತದಲ್ಲಿ ಪಡೆಯಲು ಅವಕಾಶವಿಲ್ಲವಾದ್ದರಿಂದ, ಹಾಗೂ ಸದರಿ ಅಮಾನತ್ತಿನಲ್ಲಿದ್ದ ಸರ್ಕಾರಿ ನೌಕರನು ಜೀವನಾಂಶ ಭತ್ಯೆಗಾಗಿ ಮತ್ತು ಪತ್ರ ವ್ಯವಹಾರಗಳ ಉದ್ದೇಶಕ್ಕಾಗಿ ಮನೆ ವಿಳಾಸ ತಿಳಿಸುವುದು ಕಡ್ಡಾಯವಾಗಿದ್ದರೂ, ಸದರಿಯವರು ದಿನಾಂಕ 25.08.2008 ರಂದು ಸರ್ಕಾರಕ್ಕೆ ಹಾಗೂ ದಿನಾಂಕ: 18.10.2008 ಮತ್ತು ದಿನಾಂಕ 27.10.2008 ರಂದು ಈ ನಿರ್ದೇಶನಾಲಯಕ್ಕೆ ಸಲ್ಲಿಸಿದ ಮನವಿಗಳಲ್ಲಿ ಅವರ ಮನೆ ವಿಳಾಸ ನಮೂದಿಸದೇ ಸಲ್ಲಿಸಿದ್ದನ್ನು ತೀವ್ರವಾಗಿ ಪರಿಗಣಿಸಿ, ಇದೊಂದು ಅವರ ದುರ್ನಡತೆ ಎಂದು ಪರಿಗಣಿಸಲಾಗಿದ್ದು, ಸದರಿ ಅವರ ಮನೆ ವಿಳಾಸವನ್ನು ಕೇಂದ್ರ ಕಛೇರಿಗೆ ಸಲ್ಲಿಸತಕ್ಕದ್ದೆಂದು ಸೂಚಿಸಲಾಗಿತ್ತು.

6. ಅಮಾನತ್ತಿನಲ್ಲಿದ್ದ ಸದರಿ ಸರ್ಕಾರಿ ನೌಕರರು, ದಿನಾಂಕ 25.08.2008 ರಂದು ಸರ್ಕಾರಕ್ಕೆ ಹಾಗೂ ದಿನಾಂಕ 27.10.2008 ರಂದು ಈ ನಿರ್ದೇಶನಾಲಯಕ್ಕೆ ಸಲ್ಲಿಸಿದ ಅವರ ಮನವಿಯನ್ನು ಅನುಕ್ರಮವಾಗಿ, ಅನುಬಂಧ "ಡಿ" ಮತ್ತು "ಇ" ರಲ್ಲಿ ನೀಡಲಾಗಿದ್ದು, ಇವುಗಳನ್ನು ಪರಿಶೀಲಿಸಲಾಗಿ, ಸದರಿ ಆಪಾದಿತ ಸರ್ಕಾರಿ ನೌಕರರನ್ನು, ಅಮಾನತ್ತಿನಲ್ಲಿದ್ದ ಅವಧಿಯಲ್ಲಿ ಆತನನ್ನು ಸಂಪರ್ಕಿಸಲು ಅಥವಾ ಆತನಿಗೆ ಯಾವುದೇ ಜ್ಞಾಪನ/ಪತ್ರ ವ್ಯವಹಾರಗಳು ತಲುಪದಂತೆ ದುರುದ್ದೇಶಪೂರ್ವಕವಾಗಿ, ಅವರ ಅಮಾನತ್ತಿನಲ್ಲಿದ್ದ ಅವಧಿಯಲ್ಲಿ ಆತನ ಮನೆ ವಿಳಾಸವನ್ನು ಯಾವುದೇ ಪತ್ರ ವ್ಯವಹಾರದಲ್ಲಿ ತಿಳಿಸದೇ, ಮೇಲಾಧಿಕಾರಿಗಳನ್ನು ಹಾಗೂ ಶಿಸ್ತುಪ್ರಾಧಿಕಾರವನ್ನು ನಿರಂತರವಾಗಿ ತಪ್ಪುದಾರಿಗೆ ಎಳೆಯುವ ಹಾಗೂ ಅವರ ವಿರುದ್ದದ ಉದ್ದೇಶಿಸಲಾದ ಇಲಾಖಾ ವಿಚಾರಣೆಯ ದಾರಿ ತಪ್ಪಿಸುವ ಪ್ರಯತ್ನವನ್ನು ನಿರಂತರವಾಗಿ ಎಸಗಿರುತ್ತಾರೆ.

7. ಮೇಲೆ ನೀಡಲಾದ ಅಂಶಗಳನ್ನು ಪುನರುಚ್ಚರಿಸುತ್ತಾ ಹಾಗೂ ಈ ಇಲಾಖಾ ವಿಚಾರಣೆಯ ದಾರಿಯನ್ನು ತಪ್ಪಿಸಬಹುದಾದ ದುರುದ್ದೇಶದಿಂದ, ಸದರಿ ಅಮಾನತ್ತಿನಲ್ಲಿದ್ದ ಪ್ರಥಮ ದರ್ಜೆ ಸಹಾಯಕರಾದ ಶ್ರೀ ಆದಿಕುಮಾರ, ಇವರು ಉಲ್ಲೇಖ(5) ರಲ್ಲಿರುವ ಅವರ ಮನವಿ ದಿನಾಂಕ: 27.10.2008 **(ಅನುಬಂಧ –– ಬಿ)** ಹಾಗೂ ಅದಕ್ಕೆ ಪ್ರತ್ಯುತ್ತರವಾಗಿ ಹೊರಡಿಸಲಾದ ದಿನಾಂಕ:7.11.2008 ರಂದು ಉಲ್ಲೇಖ (7) ಹೊರಡಿಸಲಾದ ಜ್ಞಾಪನವನ್ನು (ಅನುಬಂಧ–ಸಿ) ಉಲ್ಲೇಖಿಸಿದೆ.

ಹಾಗೂ ಅವರ ಮನೆ ವಿಳಾಸ ನೀಡದೆ "ನಿರ್ದೇಶಕರು ಮತ್ತು ಶಿಸ್ತು ಪ್ರಾಧಿಕಾರ" ಎಂದು ನಮೂದಿಸಿ ಉಲ್ಲೇಖ (8) ರಲ್ಲಿ ದಿನಾಂಕ:25.11.2008 ರಂದು ಸಲ್ಲಿಸಿದ ಇನ್ನೊಂದು ಮನವಿಯಲ್ಲಿ (ಅನುಬಂಧ–F) ಉಲ್ಲೇಖ (6) ರಲ್ಲಿನ ದಿನಾಂಕ: 27.10.2008 ರಲ್ಲಿ ಅವರ ಮನವಿಯಲ್ಲಿನ ಅಂಶಗಳನ್ನು ಪುನರುಚ್ಚರಿಸಿದ್ದರಿಂದ, ಈ ನಿರ್ದೇಶನಾಲಯದ ಜ್ಞಾಪನದ ದಿನಾಂಕ: 22.12.2008 ನ್ನು (ಅನುಬಂಧ–G) ಹೊರಡಿಸಲಾಗಿತ್ತು. ಸದರಿ ಅವರು ಈ ಜ್ಞಾಪನವನ್ನು ದಿನಾಂಕ : 29.12.2008 ರಂದು ಪಡೆದಿರುವುದಾಗಿ ಸ್ವೀಕೃತಿ ನೀಡಿರುತ್ತಾರೆ. ಹಾಗೂ ಅವರ ವಿರುದ್ದದ ಆರೋಪಗಳಿಗೆ ಸಂಬಂಧಿಸಿದಂತೆ, ಅವರ ರಕ್ಷಣಾ ಹೇಳಿಕೆಯನ್ನು ಸಲ್ಲಿಸಲು ನಿರಂತರವಾಗಿ ತಪ್ಪಿಸಿಕೊಳ್ಳಲು ಪ್ರಯತ್ನಿಸುತ್ತಿರುವುದಲ್ಲದೇ, ಇದೇ ವಿಷಯಕ್ಕೆ ಸಂಬಂಧಿಸಿದ ಉಲ್ಲೇಖ (11) ರಲ್ಲಿನ ದಿನಾಂಕ: 5.01.2009 ರಂದು ಸಲ್ಲಿಸಿದ ಅವರ ಮನವಿಯನ್ನು (ಅನುಬಂಧ–H) ನಿಯಮಾನುಸಾರ ಪರಿಶೀಲಿಸಿ ಉಲ್ಲೇಖ (12) ರಲ್ಲಿನ ಈ ನಿರ್ದೇಶನಾಲಯದ ಜ್ಞಾಪನ ದಿನಾಂಕ:04.02.2009 ರಲ್ಲಿ ತಿರಸ್ಕರಿಸಲಾಗಿದೆ. (ಅನುಬಂಧ–J)

ಒಟ್ಟಾರೆ ಸದರಿ ಶ್ರೀ ಆದಿಕುಮಾರ್, ಪ್ರಥಮ ದರ್ಜೆ ಸಹಾಯಕರು, ಅವರು ಅಮಾನತ್ತಿನಲ್ಲಿದ್ದ ಅವಧಿಯಲ್ಲಿ ಅವರ ಮನೆ ವಿಳಾಸ ನೀಡದೇ ಇದ್ದುದರಿಂದ ಹಾಗೂ ಅವರ ಒಂದು ಮನವಿ ದಿನಾಂಕ: 25.08.2008 ರಲ್ಲಿ ಅವರ ಪತ್ನಿಯು ಹೊಸಕೋಟೆ (ಬೆಂಗಳೂರು ಗ್ರಾಮಾಂತರ ಜಿಲ್ಲೆ) ಇಲ್ಲಿನ ಸರ್ಕಾರಿ ಪ್ರಾಥಮಿಕ ಇಲಾಖೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿರುವುದಾಗಿ ನಮೂದಿಸಿದ್ದರಿಂದ (ಅನುಬಂಧ – ಸಿ) ಹಾಗೂ ಅವರ ಇತ್ತೀಚಿನ ಸೇವಾ ದಾಖಲಾತಿಗಳಲ್ಲಿ ಅವರು ನೀಡಿದ ವಿಳಾಸಕ್ಕೆ (ಶ್ರೀ ಆದಿಕುಮಾರ್, ಅಮಾನತ್ತಿನಲ್ಲಿರುವ ಪ್ರಥಮ ದರ್ಜೆ ಸಹಾಯಕರು, ಸಂಖ್ಯೆ: 23/24, ಟೀಚರ್ಸ್ ಕಾಲೋನಿ, ವಿ.ವಿ.ಬಡಾವಣೆ, ಓಂ ಶ್ರೀ ಸ್ಕೂಲ್ ಹತ್ತಿರ, ಹೊಸಕೋಟೆ, ಬೆಂಗಳೂರು ಗ್ರಾಮಾಂತರ ಜಿಲ್ಲೆ) ಹಾಗೂ, ಸದರಿ ಅವರು ಕೇವಲ ಜೀವನಾಂಶ ಭತ್ಯೆ ಪಡೆಯುವ ಉದ್ದೇಶಕ್ಕಾಗಿ ಅಮಾನತ್ತಿನ ಅವಧಿಯಲ್ಲಿ ರಾಮನಗರ ಕೇಂದ್ರ ಸ್ಥಾನದಲ್ಲಿರುವುದಾಗಿ ಕಛೇರಿ ಮುಖ್ಯಸ್ಥರನ್ನು ನಂಬಿಸುವ ಒಂದೇ ಉದ್ದೇಶದಿಂದ ರಾಮನಗರದಲ್ಲಿನ ವಿಳಾಸಗಳಿಗೆ (ಶ್ರೀ ಆದಿಕುಮಾರ್, ಅಮಾನತ್ತಿನಲ್ಲಿರುವ ಪ್ರಥಮ ದರ್ಜೆ ಸಹಾಯಕರು, ಕೆ/ಆಫ್ ಶ್ರೀ ಮಹದೇವಸ್ವಾಮಿ, 9/0, ಶ್ರೀ ಮಹದೇವ, ಶೆಟ್ಟಿಯಳ್ಳಿ ಬೀದಿ, ಆದಿಶಕ್ತಿ ದೇವಸ್ಥಾನದ ಹತ್ತಿರ, ರಾಮನಗರ) ಅವರಿಗೆ ನೀಡಲಾದ ಉಲ್ಲೇಖ (7) ಮತ್ತು (10) ರಲ್ಲಿ ಜ್ಞಾಪನಗಳನ್ನು ಹಾಗೂ ಉಲ್ಲೇಖ (9) ರಲ್ಲಿನ ಅವರ ಅಮಾನತ್ತು ರದ್ದುಗೊಳಿಸಲಾದ ಆದೇಶವನ್ನು ನೋಂದಾಯಿತ ಅಂಚೆ ಮೂಲಕ ಜಾರಿ ಮಾಡಲಾಗಿತ್ತಾದರೂ, ಕಾರಣ ಕೇಳುವ ಜ್ಞಾಪನವನ್ನು ಜಾರಿ ಮಾಡುವ ಸಂದರ್ಭದಲ್ಲಿ ಸದರಿ ಅವರು "not found" ಎಂದು ಅಂಚೆ ಇಲಾಖೆಯ ಮಾಹಿತಿ ಅನ್ವಯ ಹಾಗೂ ಅವರ ಮನೆ ವಿಳಾಸಗಳಿಗೆ ಕಳುಹಿಸಲಾದ ಎಲ್ಲಾ ಪತ್ರ ವ್ಯವಹಾರಗಳು ಹಿಂತಿರುಗಿದ ನಂತರವೂ, ಸದರಿ ಅವರು ದಿನಾಂಕ: 29.12.2008 ರಂದು ಅವರಿಗೆ ಹೊರಡಿಸಲಾದ ಜ್ಞಾಪನಗಳನ್ನು ಸ್ವೀಕರಿಸಿದ್ದರೂ , ಪ್ರಸ್ತುತ ಅವರ ವಿರುದ್ದದ ಉದ್ದೇಶಿತ ಇಲಾಖಾ ವಿಚಾರಣೆಯು ಪ್ರಾರಂಭದ ಹಂತದಿಂದಲೂ, ಸಂಪೂರ್ಣವಾದ ನಕಾರಾತ್ಮಕವಾದ ಪ್ರತಿಕ್ರಿಯೆ ನೀಡುತ್ತಿರುವುದರಿಂದ, ಶ್ರೀ ಆದಿಕುಮಾರ್, ಪ್ರಥಮ ದರ್ಜೆ ಸಹಾಯಕರು, ಪ್ರಸ್ತುತ ಜಿಲ್ಲಾ ಸಂಖ್ಯಾ ಸಂಗ್ರಹಣಾಧಿಕಾರಿಗಳ ಕಛೇರಿ, ಕೋಲಾರ ಜಿಲ್ಲೆ ಕೋಲಾರ ಇವರ ವಿರುದ್ದ ಹೊರಿಸಲಾದ ಆರೋಪಗಳ ಸತ್ಯಾ ಸತ್ಯತೆಯನ್ನು ಕಂಡುಕೊಳ್ಳಲು ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು, 1957 ರ ನಿಯಮ 11 ರ ಅಡಿಯಲ್ಲಿ ಇಲಾಖಾ ವಿಚಾರಣೆ ಏರ್ಪಡಿಸಲು ನಿರ್ಧರಿಸಿದೆ. ಆದುದರಿಂದ ಈ ಕೆಳಕಂಡಂತೆ ಆದೇಶ ಹೊರಡಿಸಲಾಗಿದೆ:–

**ಕಛೇರಿ ಆದೇಶದ ಸಂಖ್ಯೆ: ಆಡಳಿತ/580/08–09**

ಪ್ರಸ್ತಾವನೆಯಲ್ಲಿ ವಿವರಿಸಿದ ಕಾರಣಗಳ ಹಿನ್ನಲೆಯಲ್ಲಿ, ಈ ಪ್ರಕರಣದಲ್ಲಿ ಆಪಾದಿತರಾದ ಶ್ರೀ ಆದಿಕುಮಾರ್, ಪ್ರಥಮ ದರ್ಜೆ ಸಹಾಯಕರು, ಪ್ರಸ್ತುತ ಜಿಲ್ಲಾ ಸಾಂಖ್ಯಿಕ ಅಧಿಕಾರಿಗಳ ಕಛೇರಿ, ಕೋಲಾರ ಜಿಲ್ಲೆ, ಕೋಲಾರ ಇವರ ವಿರುದ್ದ ಇಲಾಖಾ ವಿಚಾರಣೆ ಏರ್ಪಡಿಸಲು, ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು, 1957 ರ ನಿಯಮ 11 ರ ಅಡಿಯಲ್ಲಿ ಶ್ರೀ ಪದ್ಮನಾಭ ಕೇದಿಲಾಯ, ನಿವೃತ್ತ ಜಿಲ್ಲಾ ಹಾಗೂ ಸೆಷನ್ಸ್ ನ್ಯಾಯಾಧೀಶರು, (ಸಂಖ್ಯೆ: 45, 4 ನೇ ಕ್ರಾಸ್, ಜುಡಿಶಿಯಲ್ ಲೇಔಟ್, ಸಂಜಯನಗರ, ಬೆಂಗಳೂರು – 560 094) ಇವರನ್ನು ವಿಚಾರಣಾಧಿಕಾರಿಗಳನ್ನಾಗಿ ನೇಮಿಸಿದೆ.

ಶಿಸ್ತು ಪ್ರಾಧಿಕಾರದ ಪರವಾಗಿ ಪ್ರಕರಣವನ್ನು ವಿಚಾರಣಾಧಿಕಾರಿಗಳ ಮುಂದೆ ಮಂಡಿಸಲು ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು, 1957 ರ ನಿಯಮ 11 (5) ರಲ್ಲಿ ಪ್ರದತ್ತವಾದ ಅಧಿಕಾರದ ಅನ್ವಯ ಶ್ರೀ ಎಂ.ಎನ್.ಚಾಕರಿ, ಸಹಾಯಕ ನಿರ್ದೇಶಕರು, ಆರ್ಥಿಕ ಮತ್ತು ಸಾಂಖ್ಯಿಕ ನಿರ್ದೇಶನಾಲಯ, ಕೇಂದ್ರ ಕಛೇರಿ, ಇವರನ್ನು ಈ ಪ್ರಕರಣದ ಮಂಡನಾಧಿಕಾರಿನ್ನಾಗಿ ನೇಮಿಸಿದೆ.

ವಿಚಾರಣಾಧಿಕಾರಿಗಳು, ಈ ಪ್ರಕರಣದ ವಿಚಾರಣೆಯನ್ನು ಈ ನಿರ್ದೇಶನಾಲಯದ ಕೇಂದ್ರ ಕಚೇರಿಯಲ್ಲಿ ಅಥವಾ ಅವರು ಗುರುತಿಸಿ ನಿಗಧಿಪಡಿಸಬಹುದಾದ ಸ್ಥಳದಲ್ಲಿ ಏರ್ಪಡಿಸಬಹುದಾಗಿರುತ್ತದೆ. ಈ ಉದ್ದೇಶಕ್ಕಾಗಿ ಅವರಿಗೆ ಸೂಕ್ತವಾದ ಸ್ಥಳಾವಕಾಶ, ಗಣಕಯಂತ್ರ ನಿರ್ವಹಿಸುವಂತವರ ಸೇವೆಯನ್ನು ಹಾಗೂ ಲೇಖನ ಸಾಮಗ್ರಿಗಳನ್ನು ಒದಗಿಸುವ ವ್ಯವಸ್ಥೆ ಮಾಡಲಾಗುವುದು.

ಈ ಪ್ರಕರಣದ ವಿಚಾರಣೆಗಾಗಿ ಸರ್ಕಾರದ ಆದೇಶದ ಸಂಖ್ಯೆ: ಸಿಆಸುಇ/22/ಸೇಇವಿ 2007 ದಿನಾಂಕ: 11/04/2008 ರ ಅನ್ವಯ ರೂ.8000/– (ಎಂಟು ಸಾವಿರ ರೂಗಳು) ಸಂಚಿತ ಸಂಭಾವನೆಯನ್ನು ಹಾಗೂ ರೂ.1,500/– (ರೂ ಒಂದು ಸಾವಿರದ ಐದು ನೂರು) ವಾಹನ ಭತ್ಯೆಯನ್ನು ವಿಚಾರಣಾಧಿಕಾರಿಗಳಿಗೆ ವಿಚಾರಣಾ ವರದಿಯನ್ನು ಸಲ್ಲಿಸಿದ ತಕ್ಷಣ ಜಿಲ್ಲಾ ಸಂಖ್ಯಾ ಸಂಗಹಣಾಧಿಕಾರಿಗಳು, ರಾಮನಗರ, ಇವರ ಕಛೇರಿಯಿಂದ ಪಾವತಿಸತಕ್ಕದ್ದು. ವಿಚಾರಣಾಧಿಕಾರಿಗಳು ವಿಚಾರಣಾ ವರದಿಯನ್ನು 2 ತಿಂಗಳೊಳಗಾಗಿ ಸಲ್ಲಿಸಲು ಕೋರಲಾಗಿದೆ.

**ಹೆಚ್.ಇ. ರಾಜಶೇಖರಪ್ಪ**

ಪಿ.ಆರ್.197 ನಿರ್ದೇಶಕರು ಮತ್ತು ಶಿಸ್ತು ಪ್ರಾಧಿಕಾರ.

**ಶಿವಮೊಗ್ಗ ಜಿಲ್ಲಾ ಸಹಕಾರ ಸಂಘಗಳ ಉಪ–ನಿಬಂಧಕರು, ಶಿವಮೊಗ್ಗ ಜಿಲ್ಲೆ, ಶಿವಮೊಗ್ಗ ರವರ ಕಛೇರಿ**

**ಕ್ರ.ಸಂ. ಡಿಆರ್ಎಸ್: ಸಮಾಪನೆ:ಡಿಎಲ್ಎಸ್:236:07–08/12, ದಿನಾಂಕ:10ನೇ ಮಾರ್ಚ್, 2008**

**ವಿಷಯ:** ನಿಷ್ಕ್ರಿಯಗೊಂಡಿರುವ ಸಣ್ಣ ನೀರಾವರಿ ನೀರು ಬಳಕೆದಾರರ ಸಹಕಾರ ಸಂಘ ನಿ., ಸಿರಿಗೆರೆ, ಶಿವಮೊಗ್ಗ ತಾ: ಇದನ್ನು ಸಮಾಪನೆಗೊಳಿಸುವ ಬಗ್ಗೆ.

**ಉಲ್ಲೇಖ:**1) ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಶಿವಮೊಗ್ಗ ಉಪವಿಭಾಗ, ಶಿವಮೊಗ್ಗ ಇವರ ಪತ್ರ ಸಂಖ್ಯೆ: ಸನಿ–24:ಸಮಾಪನೆ:107:07–08, ದಿನಾಂಕ:27.02.2008, 04.01.2008.

2) ಈ ಕಛೇರಿಯ ಕಾರಣ ಕೇಳಿ ನೀಡಿದ ನೋಟೀಸ್ ದಿನಾಂಕ:25.01.2008.

**ಪ್ರಸ್ತಾವನೆ:**

ಸಣ್ಣ ನೀರಾವರಿ ನೀರು ಬಳಕೆದಾರರ ಸಹಕಾರ ಸಂಘ ನಿ., ಸಿರಿಗೆರೆ ಶಿವಮೊಗ್ಗ ತಾಲ್ಲೂಕು, ಈ ಸಂಘವು ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಶಿವಮೊಗ್ಗ ಉಪವಿಭಾಗ ಇವರ ಕಛೇರಿಯಲ್ಲಿ ಸಂಖ್ಯೆ: ಎಆರ್–24: ನೊಂದಣಿ: ಆರ್‌ಜಿಎನ್:76:30001:2000–01 ದಿನಾಂಕ:07.03.2001ರಲ್ಲಿ ನೊಂದಣಿಯಾಗಿರುತ್ತದೆ. ಒಟ್ಟು 56 ಜನ ಸದಸ್ಯರಿದ್ದು, ಸಂಘವು ನೊಂದಣಿಯಾದಂದಿನಿಂದಲೂ ಇದುವರೆಗೂ ಯಾವುದೇ ಕಾರ್ಯಚಟುವಟಿಕೆಗಳನ್ನು ಮಾಡದೆ ಬೈಲಾದಲ್ಲಿನ ಉದ್ದೇಶಗಳನ್ನು ಈಡೇರಿಸುವಲ್ಲಿ ವಿಫಲವಾಗಿರುತ್ತದೆ. ಸಂಘದಿಂದ ಸದಸ್ಯರಿಗೆ ಯಾವುದೇ ರೀತಿಯ ಸೇವೆ ದೊರಕುತ್ತಿಲ್ಲ, ಅಲ್ಲದೆ ಸದಸ್ಯರಿಗೂ ಸಹ ಸಂಘದ ಬಗ್ಗೆ ಆಸಕ್ತಿ ಇರುವುದಿಲ್ಲ. ಈ ಹಿನ್ನೆಲೆಯಲ್ಲಿ ಉಲ್ಲೇಖ(1)ರಲ್ಲಿ ಸಹಾಯಕ ನಿಬಂಧಕರು, ಶಿವಮೊಗ್ಗ ಉಪವಿಭಾಗ, ಶಿವಮೊಗ್ಗ ಇವರು ಸಂಘದ ಸಮಾಪನೆಗೆ ಶಿಫಾರಸ್ಸು ಮಾಡಿದ ಕಾರಣ ಸಂಘದ ಆಡಳಿತ ಮಂಡಳಿಗೆ ಈ ಕಛೇರಿಯಿಂದ ಉಲ್ಲೇಖ (2)ರಲ್ಲಿ ಕಾರಣ ಕೇಳಿ ನೋಟೀಸ್ ನೀಡಲಾಗಿರುತ್ತದೆ.

ಸದರಿ ನೋಟೀಸಿಗೆ ಸಂಘದ ಆಡಳಿತ ಮಂಡಳಿ ಸದಸ್ಯರು ಯಾವುದೇ ರೀತಿಯಲ್ಲಿ ಪ್ರತಿಕ್ರಿಯಿಸದಿರುವುದರಿಂದ, ಈ ಸಂಘದಿಂದ ಸದಸ್ಯರಿಗಾಗಲಿ, ಸಾರ್ವಜನಿಕರಿಗಾಗಲಿ ಯಾವುದೇ ಪ್ರಯೋಜನವಿಲ್ಲವೆಂದು ಮನಗಾಣುವುದರಿಂದ ಈ ಕೆಳಕಂಡಂತೆ ಆದೇಶಿಸಿದೆ.

**ಆದೇಶ**

ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 72(2)ರನ್ವಯ ಮತ್ತು ಕರ್ನಾಟಕ ಸರ್ಕಾರದ ಅಧಿಸೂಚನೆ ಸಂಖ್ಯೆ: ಸಿಎಂಡಬ್ಲ್ಯೂ:69:ಸಿಎಲ್ಎಂ:2001 ದಿನಾಂಕ:21.11.2001ರಲ್ಲಿ ದತ್ತವಾದ ಅಧಿಕಾರದನ್ವಯ, ಸಿ.ಎನ್.ದೇವರಾಜ, ಸಹಕಾರ ಸಂಘಗಳ ಉಪ–ನಿಬಂಧಕರು, ಶಿವಮೊಗ್ಗ ಜಿಲ್ಲೆ, ಶಿವಮೊಗ್ಗ ಆದ ನಾನು ಸಣ್ಣ ನೀರಾವರಿ ನೀರು ಬಳಕೆದಾರರ ಸಹಕಾರ ಸಂಘ ನಿ., ಸಿರಿಗೆರೆ, ಶಿವಮೊಗ್ಗ ತಾಲ್ಲೂಕು ಇದನ್ನು ಸಮಾಪನೆಗೊಳಿಸಿ ಆದೇಶಿಸಿರುತ್ತೇನೆ.

ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 73ರನ್ವಯ ನಿರೀಕ್ಷಕರು, ಶಿವಮೊಗ್ಗ ಇವರನ್ನು ಸಮಾಪನಾಧಿಕಾರಿಯನ್ನಾಗಿ ನೇಮಿಸಿದ್ದೇನೆ.

ಸಮಾಪನಾಧಿಕಾರಿಯವರು ಈ ಆದೇಶದ 30 ದಿನಗಳೊಳಗಾಗಿ ಸಮಾಪನಾ ಸಹಕಾರ ಸಂಘದ ಪ್ರಭಾರ ಪಡೆದು ನಡವಳಿಕೆ ನಡೆಸತಕ್ಕದ್ದು ಹಾಗೂ ಜರೂರಾಗಿ ನೊಂದಣಿ ರದ್ಧತಿಗೆ ಕ್ರಮವಿಡಲು ಆದೇಶಿಸಿದೆ.

ಈ ಆದೇಶವನ್ನು ದಿನಾಂಕ:10.03.2008ರಂದು ನನ್ನ ಸ್ವಸಹಿ ಮತ್ತು ಕಛೇರಿ ಮುದ್ರೆಯೊಂದಿಗೆ ಹೊರಡಿಸಿದೆ.

**ಸಿ.ಎನ್. ದೇವರಾಜ್**

ಪಿ.ಆರ್.428 ಸಹಕಾರ ಸಂಘಗಳ ಉಪ–ನಿಬಂಧಕರು, ಶಿವಮೊಗ್ಗ ಜಿಲ್ಲೆ, ಶಿವಮೊಗ್ಗ.

**ಸಹಕಾರ ಇಲಾಖೆ**

**ಸಹಕಾರ ಸಂಘಗಳ ಉಪ–ನಿಬಂಧಕರು, ದಾವಣಗೆರೆ ಜಿಲ್ಲೆ, ದಾವಣಗೆರೆ ಇವರ ಕಛೇರಿ**

**ವಿಷಯ:** ಸಮಾಪನೆಗೊಂಡಿರುವ ಶ್ರೀ ವೀರಭದ್ರೇಶ್ವರ ಪಾಟರಿ ಅಂಡ್ ಅರ್ತನ್‌ವೇರ್ ಇಂಡಸ್ಟ್ರೀಯಲ್ ಕೋ–ಆಪರೇಟಿವ್ ಸೊಸೈಟಿ ಲಿ., ಬಾವಿಹಾಳ್, ದಾವಣಗೆರೆ ತಾಲ್ಲೂಕು, ಇದನ್ನು ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ ಕಲಂ 72(3) ರನ್ವಯ ಪುನಃಶ್ಚೇತನಗೊಳಿಸುವ ಬಗ್ಗೆ.

**ಉಲ್ಲೇಖ:**1) ಈ ಕಛೇರಿ ಪತ್ರ ಸಮಸಂಖ್ಯೆ: ಡಿಆರ್/ಡಿವಿಜಿ/ ಸಮಾಪನೆ/ ಸಿಆರ್–48/2006–07, ದಿನಾಂಕ:14.03.2007.

2) ಸಹಕಾರ ಸಂಘಗಳ ಸಹಾಯಕ ನಿಬಂಧಕರು, ದಾವಣಗೆರೆ ಉಪವಿಭಾಗ, ದಾವಣಗೆರೆ ಇವರ ಪತ್ರಸಂಖ್ಯೆ: ಸನಿ–31/ಸಮಾಪನೆ/ಸಿಆರ್–18/ವೀರಭದ್ರ/07–08, ದಿನಾಂಕ:06.03.2008.

**ಪ್ರಸ್ತಾವನೆ:**

ಪ್ರಸ್ತುತ ವಿಷಯ ಮತ್ತು ಉಲ್ಲೇಖಕ್ಕೆ ಸಂಬಂಧಿಸಿದಂತೆ ವಿಷಯ ಸೂಚಿತ ಸಂಘವು ಕಳೆದ ಹಲವಾರು ವರ್ಷಗಳಿಂದ ಸ್ಥಗಿತಗೊಂಡಿದ್ದ ಕಾರಣ ಉಲ್ಲೇಖ (1)ರ ಆದೇಶದ ರೀತ್ಯಾ ಸಮಾಪನೆಗೊಳಿಸಿ ಸಹಕಾರ ಸಂಘಗಳ ನಿರೀಕ್ಷಕರು, 1ನೇ ವೃತ್ತ, ದಾವಣಗೆರೆ ಇವರನ್ನು ಸಮಾಪನಾಧಿಕಾರಿಯನ್ನಾಗಿ ನೇಮಕ ಮಾಡಲಾಗಿತ್ತು. ದಿನಾಂಕ:13.08.07ರಂದು ಶ್ರೀ ಕೆ.ಎನ್. ತಿಪ್ಪೇಸ್ವಾಮಿ ಇವರ ಅಧ್ಯಕ್ಷತೆಯಲ್ಲಿ ಜರುಗಿದ ಸಂಘದ ಸರ್ವಸದಸ್ಯರ ಸಭೆಯಲ್ಲಿ ಸಂಘದ ಸದಸ್ಯರ ಹಿತದೃಷ್ಟಿಯಿಂದ ಸಂಘದ ಕಾರ್ಯಚಟುವಟಿಕೆಗಳನ್ನು ಮುಂದುವರೆಸಿಕೊಂಡು ಹೋಗಲು ಅವಕಾಶ ಮಾಡಿಕೊಡಲು ಸರ್ವಾನುಮತದಿಂದ ಇಲಾಖಾಧಿಕಾರಿಗಳನ್ನು ಕೋರಲು ತೀರ್ಮಾನ ಕೈಗೊಂಡಿರುತ್ತಾರೆ.

ಸಹಕಾರ ಸಂಘಗಳ ಸಹಾಯಕ ನಿಬಂಧಕರು, ದಾವಣಗೆರೆ ಇವರು ಉಲ್ಲೇಖ (2)ರಲ್ಲಿ ಸಂಘದ ಸಮಾಪನಾ ಆದೇಶವನ್ನು ರದ್ದುಪಡಿಸಿ, ಸದರಿ ಸಂಘವನ್ನು ಸಂಘದ ಸದಸ್ಯರ ಹಿತದೃಷ್ಟಿಯಿಂದ ಪುನಃಶ್ಚೇತನಕ್ಕೆ ಅವಕಾಶ ಮಾಡಿಕೊಡಲು ಕೋರಿರುತ್ತಾರೆ. ದಿನಾಂಕ:13.08.2007ರಂದು ಜರುಗಿದ ಸಭಾ ನಡವಳಿಕೆಗಳು, ಹಾಗೂ 1996–1997ನೇ ಸಾಲಿನ ಲೆಕ್ಕಪರಿಶೋಧನಾ ಆರ್ಥಿಕ ತಃಖ್ತೆಗಳನ್ನು ಸಲ್ಲಿಸಿರುತ್ತಾರೆ. ಈ ಮೇಲ್ಕಂಡ ಎಲ್ಲಾ ಅಂಶಗಳನ್ನು ಪರಿಗಣಿಸಿ ಈ ಕೆಳಕಂಡ ಷರತ್ತುಗಳಿಗೊಳಪಟ್ಟು ಸಂಘವನ್ನು ಪುನಃಶ್ಚೇತನಗೊಳಿಸಲು ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಷರತ್ತುಗಳು**

1) ಕ್ರಿಯಾ ಯೋಜನೆಯ ಪ್ರಕಾರ ರೂಪಿಸಿಕೊಂಡಿರುವ ಕಾರ್ಯಕ್ರಮಗಳನ್ನು ಯಥಾವತ್ತಾಗಿ ಕಾರ್ಯರೂಪಕ್ಕೆ ತಂದು ಈ ಕಛೇರಿಗೆ ವರದಿ ಸಲ್ಲಿಸತಕ್ಕದ್ದು.

2) ಸಂಘವು ಪುನಃಶ್ಚೇತನಗೊಂಡು ಹೊಸ ಆಡಳಿತ ಮಂಡಳಿ ರಚನೆಯಾಗಿ 06 ತಿಂಗಳ ಒಳಗಾಗಿ 1997–98 ರಿಂದ 2007–08ನೇ ಸಾಲಿನವರೆಗೆ ಲೆಕ್ಕಪರಿಶೋಧನೆ ಮಾಡಿಸಿ ಲೆಕ್ಕ ಪರಿಶೋಧನಾ ವರದಿಯನ್ನು ಈ ಕಛೇರಿಗೆ ಸಲ್ಲಿಸತಕ್ಕದ್ದು.

3) ಖಾದಿ ಮಂಡಳಿಯಿಂದ ಪಡೆದಿರುವ ಸಾಲವನ್ನು ಪ್ರತಿ ಮಾಹೆ ರೂ.5,000–00 ಗಳಂತೆ ಸರ್ಕಾರಕ್ಕೆ ಜಮಾ ಮಾಡಿ, ಈ ಕಛೇರಿಗೆ ಹಾಗೂ ಸಹಕಾರ ಸಂಘಗಳ ಸಹಾಯಕ ನಿಬಂಧಕರು, ದಾವಣಗೆರೆ ಕಛೇರಿಗೆ ವರದಿ ಸಲ್ಲಿಸತಕ್ಕದ್ದು.

4) ಪ್ರತಿ ಮಾಹೆಯಾನ ವ್ಯವಹಾರ ಆಡಳಿತ ಮಂಡಳಿ ಸಭೆಯ ನಿರ್ಣಯಗಳನ್ನು ಕಲಂ 29(ಜಿ) (6) ರ ಪ್ರಕಾರ ಈ ಕಛೇರಿಗೆ ತಪ್ಪದೇ ಆಡಳಿತ ಮಂಡಳಿ ಸಭೆ ಜರುಗಿದ 5 ದಿನಗಳ ಒಳಗಾಗಿ ಈ ಕಛೇರಿಗೆ ಹಾಗೂ ಸಹಕಾರ ಸಂಘಗಳ ಸಹಾಯಕ ನಿಬಂಧಕರು, ದಾವಣಗೆರೆ ಕಛೇರಿಗೆ ವರದಿ ಸಲ್ಲಿಸತಕ್ಕದ್ದು.

5) ಸದಸ್ಯರಿಂದ ಬರಬೇಕಾದ ಸುಸ್ತಿ ಸಾಲವನ್ನು ಕೂಡಲೇ ವಸೂಲಿ ಮಾಡತಕ್ಕದ್ದು, ಮತ್ತು ಸಂಘದ ಆರ್ಥಿಕ ಅಭಿವೃದ್ಧಿ ಮಾಡಿಕೊಂಡು ಈ ಕಛೇರಿಗೆ ಹಾಗೂ ಸಹಕಾರ ಸಂಘಗಳ ಸಹಾಯಕ ನಿಬಂಧಕರು, ದಾವಣಗೆರೆ ಕಛೇರಿಗೆ ವರದಿ ಸಲ್ಲಿಸತಕ್ಕದ್ದು.

**ಆದೇಶ**

**ಸಂಖ್ಯೆ: ಡಿಆರ್/ಡಿವಿಜಿ/ ಸಮಾಪನೆ/ ಸಿಆರ್–48/2006–07, ದಿನಾಂಕ:29ನೇ ಮಾರ್ಚ್, 2008**

ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 72(3) ಹಾಗೂ ಕರ್ನಾಟಕ ಸರ್ಕಾರದ ಅಧಿಸೂಚನೆ ಸಂಖ್ಯೆ: ಸಿಎಂಡಬ್ಲ್ಯೂ:69:ಸಿಎಲ್ಎಮ್:2001, ದಿನಾಂಕ:21.11.2001 ರನ್ವಯ ದತ್ತವಾಗಿರುವ ಅಧಿಕಾರವನ್ನು ಚಲಾಯಿಸಿ ಬಿ. ಕುಬೇರಪ್ಪ, ಕೆ.ಸಿ.ಎಸ್. ಸಹಕಾರ ಸಂಘಗಳ ಉಪನಿಬಂಧಕರು, ದಾವಣಗೆರೆ ಜಿಲ್ಲೆ, ಆದ ನಾನು ಸಮಾಪನೆಗೊಂಡಿರುವ ಶ್ರೀ ವೀರಭದ್ರೇಶ್ವರ ಪಾಟರಿ ಅಂಡ್ ಅರ್ತನ್‌ವೇರ್ ಇಂಡಸ್ಟ್ರೀಯಲ್ ಕೋ–ಆಪರೇಟಿವ್ ಸೊಸೈಟಿ ಲಿ., ಬಾವಿಹಾಳ್, ದಾವಣಗೆರೆ ತಾಲ್ಲೂಕು ಇದರ ಉಲ್ಲೇಖ (1)ರ ಸಮಾಪನಾ ಆದೇಶವನ್ನು ರದ್ದುಗೊಳಿಸಿ ಈ ಸಂಘವನ್ನು ಮುಂದುವರೆಸಿಕೊಂಡು ಹೋಗಲು ಅವಕಾಶ ಮಾಡುತ್ತಾ ಈ ಮೂಲಕ ಸಂಘವನ್ನು ಪುನಃಶ್ಚೇತನಕ್ಕಾಗಿ ಆದೇಶಿಸಿರುತ್ತೇನೆ.

ಪುನಃಶ್ಚೇತನಗೊಂಡನಂತರ ಸಂಘದ ಪ್ರಥಮ ಮಹಾಸಭೆಯನ್ನು ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ ಮತ್ತು ನಿಯಮಗಳ ಪ್ರಕಾರ ಜರುಗಿಸಲು ಸಂಘದ ಕಾರ್ಯದರ್ಶಿಗೆ ಸೂಚಿಸಿದೆ. ಹಾಗೂ ನೂತನ ಆಡಳಿತ ಮಂಡಳಿಯನ್ನು ರಚಿಸಲು ಸಹಕಾರ ಸಂಘಗಳ ನಿರೀಕ್ಷಕರು, 1ನೇ ವೃತ್ತ, ಸಹಕಾರ ಸಂಘಗಳ ಸಹಾಯಕ ನಿಬಂಧಕರ ಕಛೇರಿ, ದಾವಣಗೆರೆ ಇವರನ್ನು

ಚುನಾವಣಾಧಿಕಾರಿಯನ್ನಾಗಿ ನೇಮಕ ಮಾಡಿರುತ್ತೇನೆ. ಚುನಾವಣಾಧಿಕಾರಿಗಳು, ಚುನಾವಣಾ ಕಾರ್ಯವನ್ನು ಜರುಗಿಸಿ ಹಾಗೂ ಮಹಾಸಭೆಯಲ್ಲಿ ಹಾಜರಾಗಿ ಈ ಕಛೇರಿಗೆ ವರದಿ ಮಾಡಲು ಆದೇಶಿಸಿದೆ.

ಈ ಆದೇಶವನ್ನು ನನ್ನ ಸ್ವ ಸಹಿ ಮತ್ತು ಈ ಕಛೇರಿ ಮೊಹರಿನೊಂದಿಗೆ ದಿನಾಂಕ:29.03.2008 ರಂದು ಹೊರಡಿಸಿದೆ.

ಪಿ.ಆರ್.433 ಸಹಕಾರ ಸಂಘಗಳ ಉಪ ನಿಬಂಧಕರು, ದಾವಣಗೆರೆ ಜಿಲ್ಲೆ, ದಾವಣಗೆರೆ.

**ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು, ಉಡುಪಿ ಜಿಲ್ಲೆ, ಉಡುಪಿ ಇವರ ನ್ಯಾಯಾಲಯದಲ್ಲಿ**

**ಸಂಖ್ಯೆ: ಡಬ್ಲ್ಯೂಸಿಎ/ ಸಿಆರ್–53/ಎಫ್.ಸಿ./2008, ದಿನಾಂಕ:12ನೇ ಡಿಸೆಂಬರ್, 2008**

| **ಅರ್ಜಿದಾರರು** | | **ಪ್ರತಿವಾದಿಗಳು** |
|---|---|---|
| 1) ಶ್ರೀ ದುರ್ಗಾ ನಾಯ್ಕ್ (50 ವರ್ಷ)<br>W/o ಭೀಮಯ್ಯ ನಾಯ್ಕ್<br>2) ಶ್ರೀ ಮಂಜ ಡಿ. ನಾಯ್ಕ್ (23 ವರ್ಷ)<br>S/o ದುರ್ಗಾ ನಾಯ್ಕ್<br>3) ಶ್ರೀ ನಾಗರಾಜ ನಾಯ್ಕ್ (19 ವರ್ಷ)<br>S/o ದುರ್ಗಾ ನಾಯ್ಕ್<br>4) ಶ್ರೀ ಅಣ್ಣಪ್ಪ ನಾಯ್ಕ್ (16 ವರ್ಷ)<br>S/o ದುರ್ಗಾ ನಾಯ್ಕ್<br>ವಾಸ: ಪ್ರಗತಿ ನಗರ, ಅಲೆವೂರು ಗ್ರಾಮ, ಉಡುಪಿ ತಾಲ್ಲೂಕು ಮತ್ತು ಜಿಲ್ಲೆ. | **ವಿರುದ್ಧ** | 1) ಶ್ರೀ ಸುಂದರ ರಾಮ ನಾಯಕ್ (48 ವರ್ಷ)<br>S/o ರಾಮ ನಾಯಕ್<br>ವಾಸ: ಹೆಚ್.ಐ.ಜಿ. 65, 2ನೇ ಹಂತ, ಸೀತಾರಾಮ್, ಅನಂತನಗರ, ಶಿವಳ್ಳಿ ಗ್ರಾಮ, ಉಡುಪಿ. |

**ಅಧಿಸೂಚನೆ**

ಅರ್ಜಿದಾರರಾದ ಶ್ರೀದುರ್ಗಾ ನಾಯಕ್ ಇವರು ತಮ್ಮ ಪತ್ನಿಯಾದ ಶ್ರೀಮತಿ ಪವಿತ್ರಾ ಇವರು ಶ್ರೀ ಸುಂದರ ನಾಯಕ್, ಬಿನ್ ರಾಮ ನಾಯಕ್, ಹೆಚ್.ಐ.ಜಿ., 65, 2ನೇ ಹಂತ, ಸೀತಾರಾಮ್, ಅನಂತನಗರ, ಶಿವಳ್ಳಿ ಗ್ರಾಮ, ಉಡುಪಿ ಇವರಲ್ಲಿ ಕೆಲಸಗಾರರಾಗಿದ್ದು, ಕೆಲಸದಲ್ಲಿ ನಿರತರಾಗಿದ್ದಾಗ ದಿನಾಂಕ:23.05.2008 ರಂದು ಅಪಘಾತಕ್ಕೀಡಾಗಿ ಮೃತರಾದರೆಂದು ಹೇಳಿ ಆಶ್ರಿತರಾದ ತಮಗೆ ಪ್ರತಿವಾದಿಯವರಿಂದ ಪರಿಹಾರವನ್ನು ಕೊಡಿಸಿಕೊಡಬೇಕೆಂದು ಈ ನ್ಯಾಯಾಲಯಕ್ಕೆ ಅರ್ಜಿಯನ್ನು ಸಲ್ಲಿಸಿರುತ್ತಾರೆ.

ಆದ್ದರಿಂದ ಈ ವಿಷಯದಲ್ಲಿ ಈ ಅರ್ಜಿದಾರರಲ್ಲದೆ ಬೇರೆ ಯಾರಾದರೂ ಅರ್ಜಿದಾರರಿದ್ದು, ಅವರ ಅರ್ಜಿ ಅಥವಾ ತಕರಾರು ಏನಾದರೂ ಇದ್ದರೆ ಮತ್ತು ಈ ಅರ್ಜಿಗೆ ಸಂಬಂಧಿಸಿ ಇನ್ನಿತರ ಯಾವುದೇ ರೀತಿಯ ತಕರಾರು ಇದ್ದರೆ ಈ ಅಧಿಸೂಚನೆ, ಸರ್ಕಾರಿ ರಾಜ್ಯ ಪತ್ರದಲ್ಲಿ ಪ್ರಕಟಣೆಯಾದಲ್ಲಿನಿಂದ 30 ದಿವಸಗಳ ಒಳಗೆ ಈ ನ್ಯಾಯಾಲಯಕ್ಕೆ ಸಲ್ಲಿಸಲು ಈ ಮೂಲಕ ತಿಳಿಸಲಾಗಿದೆ. ಈ ನಿಗದಿತ ಸಮಯದಲ್ಲಿ ಈ ನ್ಯಾಯಾಲಯವು ಯಾವ ಕ್ಲೈಮ್ ಅರ್ಜಿ/ ತಕರಾರು ಅರ್ಜಿ ಸ್ವೀಕರಿಸದಿದ್ದಲ್ಲಿ ಈ ನ್ಯಾಯಾಲಯವು ಮುಂದಿನ ಕ್ರಮವನ್ನು ಜರುಗಿಸುವುದೆಂದು ತಿಳಿಸಲಾಗಿದೆ.

**ಡಿ.ಜಿ. ನಾಗೇಶ**

ಕಾರ್ಮಿಕ ಅಧಿಕಾರಿ ಮತ್ತು ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು,

ಪಿ.ಆರ್.1398 ಉಡುಪಿ ಜಿಲ್ಲೆ, ಉಡುಪಿ.

**ಸಹಕಾರ ಇಲಾಖೆ**

**ಸಹಕಾರ ಸಂಘಗಳ ಉಪ–ನಿಬಂಧಕರು, ದಾವಣಗೆರೆ ಜಿಲ್ಲೆ, ದಾವಣಗೆರೆ ಇವರ ಕಛೇರಿ**

**ವಿಷಯ:** ಸಮಾಪನೆಗೊಂಡಿರುವ ಬಲ್ಲೂರು ಸೇವಾ ಸಹಕಾರ ಸಂಘ ನಿ., ದಾವಣಗೆರೆ ತಾಲ್ಲೂಕು, ಇದನ್ನು ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ ಕಲಂ 72(3)ರನ್ವಯ ಪುನಃಶ್ಚೇತನಗೊಳಿಸುವ ಬಗ್ಗೆ.

**ಉಲ್ಲೇಖ:**1) ಈ ಕಛೇರಿ ಪತ್ರ ಸಮಸಂಖ್ಯೆ: ಡಿಆರ್/ಡಿವಿಜಿ/ ಸಮಾಪನೆ/ ಸಿಆರ್–30/2003–04, ದಿನಾಂಕ:31.12.2004.

2) ಸಹಕಾರ ಸಂಘಗಳ ನಿರೀಕ್ಷಕರು, 2ನೇ ವೃತ್ತ, ಸಹಾಯಕ ನಿಬಂಧಕರ ಕಛೇರಿ, ದಾವಣಗೆರೆ ಉಪವಿಭಾಗ, ದಾವಣಗೆರೆ ಇವರ ಪತ್ರ ದಿನಾಂಕ:14.03.2008.

**ಪ್ರಸ್ತಾವನೆ:**

ಪ್ರಸ್ತುತ ವಿಷಯ ಮತ್ತು ಉಲ್ಲೇಖಕ್ಕೆ ಸಂಬಂಧಿಸಿದಂತೆ ವಿಷಯ ಸೂಚಿತ ಸಂಘವು ಕಳೆದ ಹಲವಾರು ವರ್ಷಗಳಿಂದ ಸ್ಥಗಿತಗೊಂಡಿದ್ದ ಕಾರಣ ಉಲ್ಲೇಖ (1)ರ ಆದೇಶದ ರೀತ್ಯಾ ಸಮಾಪನೆಗೊಳಿಸಿ ಸಹಕಾರ ಸಂಘಗಳ ನಿರೀಕ್ಷಕರು, 2ನೇ ವೃತ್ತ,

ದಾವಣಗೆರೆ ಇವರನ್ನು ಸಮಾಪನಾಧಿಕಾರಿಯನ್ನಾಗಿ ನೇಮಕ ಮಾಡಲಾಗಿತ್ತು. ದಿನಾಂಕ:11.11.06ರಂದು ಸಮಾಪನಾಧಿಕಾರಿಗಳ ಅಧ್ಯಕ್ಷತೆಯಲ್ಲಿ ಜರುಗಿದ ಗ್ರಾಮಸ್ಥರ ಸಭೆಯಲ್ಲಿ, ಸಂಘದ ಸದಸ್ಯರ ಹಿತದೃಷ್ಟಿಯಿಂದ ಸಂಘದ ಕಾರ್ಯಚಟುವಟಿಕೆಗಳನ್ನು ಮುಂದುವರೆಸಿಕೊಂಡು ಹೋಗಲು ಅವಕಾಶ ಮಾಡಿಕೊಡಲು ಸರ್ವಾನುಮತದಿಂದ ಇಲಾಖಾಧಿಕಾರಿಗಳನ್ನು ಕೋರಲು ತೀರ್ಮಾನ ಕೈಗೊಂಡಿರುತ್ತಾರೆ.

ಸಹಕಾರ ಸಂಘಗಳ ನಿರೀಕ್ಷಕರು, 2ನೇ ವೃತ್ತ, ಸಹಾಯಕ ನಿಬಂಧಕರ ಕಛೇರಿ, ದಾವಣಗೆರೆ ಉಪವಿಭಾಗ, ದಾವಣಗೆರೆ ಇವರು ಉಲ್ಲೇಖ (2)ರಲ್ಲಿ ಸಂಘದ ಸಮಾಪನಾ ಆದೇಶವನ್ನು ರದ್ದುಪಡಿಸಿ ಸದರಿ ಸಂಘವನ್ನು ಸಂಘದ ಸದಸ್ಯರ ಹಿತದೃಷ್ಟಿಯಿಂದ ಪುನಃಶ್ಚೇತನಕ್ಕೆ ಅವಕಾಶ ಮಾಡಿಕೊಡಲು ಕೋರಿರುತ್ತಾರೆ. ದಿನಾಂಕ:11.11.2006ರಂದು ಜರುಗಿದ ಸಭಾ ನಡವಳಿಗಳನ್ನು ಸಲ್ಲಿಸಿರುತ್ತಾರೆ. ಈ ಮೇಲ್ಕಂಡ ಎಲ್ಲಾ ಅಂಶಗಳನ್ನು ಪರಿಗಣಿಸಿ ಸಂಘವನ್ನು ಪುನಃಶ್ಚೇತನಗೊಳಿಸಲು ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಆದೇಶ**

**ನಂ.ಡಿಆರ್/ಡಿವಿಜಿ/ ಸಮಾಪನೆ/ ಸಿಆರ್–30/2003–04, ದಿನಾಂಕ:31ನೇ ಮಾರ್ಚ್, 2008**

ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 72(3) ಹಾಗೂ ಕರ್ನಾಟಕ ಸರ್ಕಾರದ ಅಧಿಸೂಚನೆ ಸಂಖ್ಯೆ: ಸಿಎಂಡಬ್ಲ್ಯೂ:69:ಸಿಎಲ್ಎಂ:2001 ದಿನಾಂಕ:21.11.2001 ರನ್ವಯ ದತ್ತವಾಗಿರುವ ಅಧಿಕಾರವನ್ನು ಚಲಾಯಿಸಿ ಬಿ ಕುಬೇರಪ್ಪ ಕೆ.ಸಿ.ಎಸ್. ಸಹಕಾರ ಸಂಘಗಳ ಉಪನಿಬಂಧಕರು, ದಾವಣಗೆರೆ ಜಿಲ್ಲೆ, ಆದ ನಾನು ಸಮಾಪನೆಗೊಂಡಿರುವ ಬಲ್ಲೂರು ಸೇವಾ ಸಹಕಾರ ಸಂಘ ನಿ., ದಾವಣಗೆರೆ ತಾಲ್ಲೂಕು, ಇದರ ಉಲ್ಲೇಖ (1)ರ ಸಮಾಪನಾ ಆದೇಶವನ್ನು ರದ್ದುಗೊಳಿಸಿ ಈ ಸಂಘವನ್ನು ಮುಂದುವರಿಸಿ ಕೊಂಡು ಹೋಗಲು ಅವಕಾಶ ಮಾಡುತ್ತಾ ಈ ಕೆಳಕಂಡ ಷರತ್ತುಗಳಿಗೆ ಒಳಪಟ್ಟು ಈ ಮೂಲಕ ಸಂಘವನ್ನು ಪುನಃಶ್ಚೇತನಕ್ಕಾಗಿ ಆದೇಶಿಸಿರುತ್ತೇನೆ.

**ಷರತ್ತುಗಳು**

(ರೂ. ಲಕ್ಷಗಳಲ್ಲಿ)

| ಕ್ರ. ಸಂ. | ವರ್ಷ | ಸದಸ್ಯತ್ವ | ಷೇರು | ಠೇವಣಿ | ಸಾಲನೀಡಿಕೆ |
|---|---|---|---|---|---|
| 1. | 2008–09 | 300 | 3.00 | 2.00 | 4.00 |
| 2. | 2009–10 | 200 | 5.00 | 4.00 | 10.00 |
| 3. | 2010–11 | 200 | 6.00 | 6.00 | 16.00 |
| 4. | 2011–12 | –– | 8.00 (ಹೆಚ್ಚುವರಿ) | 10.00 | 20.00 |
| 5. | 2012–13 | –– | 10.00 | 12.00 | 25.00 |
| 6. | 2013–14 | – | 12–00 | 15.00 | 30.00 |

ಪುನಃಶ್ಚೇತನಗೊಂಡನಂತರ ಸಮಾಪನಾಧಿಕಾರಿಗಳು ಆರಂಭಿಕವಾಗಿ ಕನಿಷ್ಠ 1.00 ಲಕ್ಷದಿಂದ 1.50 ಲಕ್ಷದವರೆಗೆ ಷೇರು ಹಣವನ್ನು 90 ದಿನಗಳ ಒಳಗಾಗಿ ಸಂಗ್ರಹಿಸಲು ಸೂಚಿಸಿದೆ. ಸದರಿ ಷೇರು ಮೊಬಲಗು ಸಂಗ್ರಹವಾದ ನಂತರ ಚುನಾವಣೆ, ಪ್ರಕ್ರಿಯೆ ಜರುಗಿಸುವಂತೆ ಹಾಗೂ ಸಂಘದ ಪ್ರಥಮ ಮಹಾಸಭೆಯನ್ನು ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ ಮತ್ತು ನಿಯಮಗಳ ಪ್ರಕಾರ ಜರುಗಿಸಲು ಸಂಘದ ಸಮಾಪನಾಧಿಕಾರಿಗೆ ಸೂಚಿಸಿದೆ. ಹಾಗೂ ನೂತನ ಆಡಳಿತ ಮಂಡಳಿಯನ್ನು ರಚಿಸಲು ಸಹಕಾರ ಸಂಘಗಳ ನಿರೀಕ್ಷಕರು, 2ನೇ ವೃತ್ತ, ಸಹಕಾರ ಸಂಘಗಳ ಸಹಾಯಕ ನಿಬಂಧಕರ ಕಛೇರಿ, ದಾವಣಗೆರೆ, ಇವರನ್ನು ಚುನಾವಣಾಧಿಕಾರಿಯನ್ನಾಗಿ ನೇಮಕ ಮಾಡಿರುತ್ತೇನೆ. ಚುನಾವಣಾಧಿಕಾರಿಗಳು, ಚುನಾವಣಾ ಕಾರ್ಯವನ್ನು ಜರುಗಿಸಿ ಹಾಗೂ ಮಹಾಸಭೆಯಲ್ಲಿ ಹಾಜರಾಗಿ ಈ ಕಛೇರಿಗೆ ವರದಿ ಮಾಡಲು ಆದೇಶಿಸಿದೆ.

ಈ ಆದೇಶವನ್ನು ನನ್ನ ಸ್ವ ಸಹಿ ಮತ್ತು ಈ ಕಛೇರಿ ಮೊಹರಿನೊಂದಿಗೆ ದಿನಾಂಕ:31.03.2008ರಂದು ಹೊರಡಿಸಿದೆ.

ಪಿ.ಆರ್.434 ಸಹಕಾರ ಸಂಘಗಳ ಉಪನಿಬಂಧಕರು, ದಾವಣಗೆರೆ ಜಿಲ್ಲೆ, ದಾವಣಗೆರೆ.

**ವಾಣಿಜ್ಯ ತೆರಿಗೆ ಇಲಾಖೆ**

**ಕರ್ನಾಟಕ ಮೌಲ್ಯವರ್ಧಿತ ತೆರಿಗೆ ಕಾಯ್ದೆ–2003ರಡಿ ಕಳೆದುಕೊಂಡಿರುವ ಶಾಸನಬದ್ಧ ನಮೂನೆ 505 ಕುರಿತ ಪ್ರಕಟಣೆ ವಿವರಗಳು ಕೆಳಗಿನಂತೆ ಇರುತ್ತದೆ.**

| | | |
|---|---|---|
| 1. | ವರ್ತಕರ ಹೆಸರು ಹಾಗೂ ವಿಳಾಸ | ಮೆ: ಪ್ರೀಬಾವಿ ಸ್ಟೀಲ್ ಕಾರ್ಪೊರೇಷನ್, ಮಾತೃಶ್ರೀ ಲೇಔಟ್, ಸುಭಾಷ್ ನಗರ, ಎಂ.ಜಿ.ರಸ್ತೆ, ನೆಲಮಂಗಲ, ಬೆಂಗಳೂರು ಜಿಲ್ಲೆ. |
| 2. | ವರ್ತಕರ ಟಿನ್ ಸಂಖ್ಯೆ | 29910784193 |
| 3. | ನೋಂದಾಯಿತ ಕಛೇರಿ | ವಾಣಿಜ್ಯ ತೆರಿಗೆ ಸಹಾಯಕ ಆಯುಕ್ತರು, ಮೌಲ್ಯವರ್ಧಿತ ತೆರಿಗೆ ಕಛೇರಿ 065, ಪೀಣ್ಯ, ಬೆಂಗಳೂರು. |

4. ಕಳೆದುಕೊಂಡಿರುವ ಶಾಸನಬದ್ಧ ನಮೂನೆಗಳ ವಿವರಗಳು — ನಮೂನೆ 505 ಕ್ರಮಸಂಖ್ಯೆ: 1496352 ರಿಂದ 1496375 (24 ಸಂಖ್ಯೆಗಳು)

ವಾಣಿಜ್ಯ ತೆರಿಗೆ ಜಂಟಿ ಆಯುಕ್ತರು (ಆಡಳಿತ),
ಪಿ.ಆರ್.804 ಮೌಲ್ಯವರ್ಧಿತ ತೆರಿಗೆ ವಿಭಾಗ–6, ಬೆಂಗಳೂರು.

**ಸಹಕಾರ ಇಲಾಖೆ**

**ಸಹಕಾರ ಸಂಘಗಳ ಉಪ–ನಿಬಂಧಕರು, ದಾವಣಗೆರೆ ಜಿಲ್ಲೆ, ದಾವಣಗೆರೆ ಇವರ ಕಛೇರಿಯ ನಡವಳಿಗಳು**

**ವಿಷಯ:** ಸಮಾಪನೆಗೊಂಡಿರುವ ಡಿ.ಆರ್.ಎಂ. ಕಾಲೇಜ್ ನೌಕರರ ಸಹಕಾರ ಸಂಘ ನಿ., ದಾವಣಗೆರೆ ಇದರ ನೋಂದಣಿಯನ್ನು ರದ್ದುಪಡಿಸುವ ಕುರಿತು.

**ಉಲ್ಲೇಖ:**1) ಈ ಕಛೇರಿ ಆದೇಶ ಸಂಖ್ಯೆ: ಡಿಆರ್/ಡಿವಿಜಿ/ ಸಮಾಪನೆ/ ಸಿಆರ್17/2007–08, ದಿನಾಂಕ:22.02.2008.

2) ಸಹಕಾರ ಸಂಘಗಳ ಸಹಾಯಕ ನಿಬಂಧಕರು, ದಾವಣಗೆರೆ ಇವರ ಪತ್ರ ದಿನಾಂಕ:28.03.2008.

**ಪ್ರಸ್ತಾವನೆ:**

ಮೇಲ್ಕಂಡ ವಿಷಯ ಮತ್ತು ಉಲ್ಲೇಖಗಳಿಗೆ ಸಂಬಂಧಿಸಿದಂತೆ, ಈ ಮೇಲ್ಕಂಡ ಸಹಕಾರ ಸಂಘವು ನೋಂದಣಿ ಸಂಖ್ಯೆ: ಎಆರ್‌ಡಿವಿ/ 305/1967–68 ದಿನಾಂಕ:02.03.1967 ರಲ್ಲಿ ನೋಂದಣಿಯಾಗಿರುತ್ತದೆ. ಸಂಘದ ಕಾರ್ಯಚಟುವಟಿಕೆಗಳು ಪೂರ್ಣವಾಗಿ ಸ್ಥಗಿತಗೊಂಡಿದ್ದರಿಂದ, ಈ ಸಂಘವನ್ನು ಮುಂದುವರಿಸಿಕೊಂಡು ಹೋಗುವುದು ಸೂಕ್ತವಲ್ಲವೆಂದು ಭಾವಿಸಿ, ಉಲ್ಲೇಖ (1)ರ ದಿನಾಂಕ:22.02.2008ರ ಆದೇಶದಲ್ಲಿ ಸಮಾಪನೆಗೊಳಿಸಿ ಸಹಕಾರ ಸಂಘಗಳ ನಿರೀಕ್ಷಕರು, ವೃತ್ತ–2, ದಾವಣಗೆರೆ ಇವರನ್ನು ಸಮಾಪನಾಧಿಕಾರಿಯನ್ನಾಗಿ ನೇಮಕ ಮಾಡಲಾಗಿತ್ತು. ಸಮಾಪನಾಧಿಕಾರಿಗಳು ಸಂಘದ ಆಸ್ತಿ ಮತ್ತು ಜವಾಬ್ದಾರಿಗಳನ್ನು ವಿಲೇಮಾಡಿ ಶೂನ್ಯಗೊಳಿಸಿ ಸಂಘದ ನೋಂದಣಿಯನ್ನು ರದ್ದುಗೊಳಿಸಲು ಸಹಕಾರ ಸಂಘಗಳ ಸಹಾಯಕ ನಿಬಂಧಕರು, ದಾವಣಗೆರೆ ಉಪವಿಭಾಗ, ದಾವಣಗೆರೆ ಇವರ ಮೂಲಕ ಉಲ್ಲೇಖ (2)ರ ರೀತ್ಯಾ ಪ್ರಸ್ತಾವನೆ ಸಲ್ಲಿಸಿರುತ್ತಾರೆ. ಸಹಕಾರ ಸಂಘಗಳ ಸಹಾಯಕ ನಿಬಂಧಕರು, ದಾವಣಗೆರೆ ಇವರೂ ಸಹ ಈ ಸಂಘದ ನೋಂದಣಿಯನ್ನು ರದ್ದುಪಡಿಸಲು ಶಿಫಾರಸ್ಸು ಮಾಡಿರುತ್ತಾರೆ. ಈ ಅಂಶಗಳನ್ನು ಪರಿಗಣಿಸಿ ಈ ಕೆಳಕಂಡ ಆದೇಶ ಹೊರಡಿಸಲಾಗಿದೆ.

**ಆದೇಶ**

**ಸಂಖ್ಯೆ: ಡಿಆರ್.ಡಿವಿಜಿ/ಸಮಾಪನೆ/ಸಿಆರ್–17/2007–08, ದಿನಾಂಕ:31ನೇ ಮಾರ್ಚ್, 2008**

ಪ್ರಸ್ತಾವನೆಯಲ್ಲಿನ ಅಂಶಗಳನ್ನು ಪರಿಗಣಿಸಿ, ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 75ರನ್ವಯ ಹಾಗೂ ಸರ್ಕಾರದ ಅಧಿಸೂಚನೆ ಸಂಖ್ಯೆ: ಸಿಎಂಡಬ್ಲ್ಯೂ:69:ಸಿಎಲ್‌ಎಂ:2001 ದಿನಾಂಕ:21.11.2001ರ ಪ್ರಕಾರ ದತ್ತವಾದ ಅಧಿಕಾರದನ್ವಯ ದಾವಣಗೆರೆ ಜಿಲ್ಲಾ ಸಹಕಾರ ಸಂಘಗಳ ಉಪನಿಬಂಧಕರು, ಬಿ. ಕುಬೇರಪ್ಪ ಕೆ.ಸಿ.ಎಸ್. ಆದ ನಾನು ಸಮಾಪನೆಗೊಂಡ ಡಿ.ಆರ್.ಎಂ. ಕಾಲೇಜ್ ನೌಕರರ ಸಹಕಾರ ಸಂಘ ನಿ., ದಾವಣಗೆರೆ ಇದರ ನೋಂದಣಿಯನ್ನು ರದ್ದುಗೊಳಿಸಿ ಆದೇಶ ಹೊರಡಿಸಿರುತ್ತೇನೆ.

ಈ ರದ್ಧತಿಯ ಆದೇಶದ ದಿನಾಂಕದಿಂದ ಸದರಿ ಸಹಕಾರ ಸಂಘದ ಕಾರ್ಯ ಚಟುವಟಿಕೆಗಳು ನಿಂತು ಹೋಗಿರುತ್ತವೆಂದು ಭಾವಿಸಲ್ಪಡತಕ್ಕದ್ದು. ಈ ಸಂಘವು ಅಸ್ತಿತ್ವದಲ್ಲಿರುವುದಿಲ್ಲವೆಂದು ಪರಿಗಣಿಸತಕ್ಕದ್ದು ಹಾಗೂ ಕರ್ನಾಟಕ ಸಹಕಾರ ಸಂಘಗಳ ನಿಯಮಗಳು 1960ರ ನಿಯಮ 33(ಎನ್) ರನ್ವಯ ಈ ಸಂಘದ ದಾಖಲಾತಿಗಳನ್ನು ಸಹಕಾರ ಸಂಘಗಳ ಸಹಾಯಕ ನಿಬಂಧಕರು, ದಾವಣಗೆರೆ ಇವರ ಕಛೇರಿಯಲ್ಲಿಡಲು ಆದೇಶಿಸಿದೆ.

ನನ್ನ ಸ್ವಸಹಿ ಮತ್ತು ಕಛೇರಿಯ ಮೊಹರಿನೊಂದಿಗೆ ಈ ದಿನ ದಿನಾಂಕ:31.03.2008ರಂದು ಈ ಆದೇಶವನ್ನು ಹೊರಡಿಸಿರುತ್ತೇನೆ.

ಪಿ.ಆರ್.435 ಸಹಕಾರ ಸಂಘಗಳ ಉಪನಿಬಂಧಕರು, ದಾವಣಗೆರೆ ಜಿಲ್ಲೆ, ದಾವಣಗೆರೆ.

**ಜಲಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ)**

**ವಿಷಯ:** ಶ್ರೀ ಸಿ. ನಾರಾಯಣ, ಜವಾನ, ಸಣ್ಣ ನೀರಾವರಿ ಉಪವಿಭಾಗ, ಮಡಿಕೇರಿ, ಇವರ ಅನಧಿಕೃತ ಗೈರು ಹಾಜರಾತಿ ಬಗ್ಗೆ ಇಲಾಖಾ ವಿಚಾರಣೆ–ದಂಡನೆ ವಿಧಿಸಿ ಅಂತಿಮ ಆದೇಶ ಹೊರಡಿಸುವ ಬಗ್ಗೆ.

**ಉಲ್ಲೇಖ:** 1) ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ (ದ) ಬೆಂಗಳೂರು, ಇವರ ಪತ್ರ ಸಂಖ್ಯೆ: ಸಿಎಂಐ/ತನಿಖಾಕೋಶ/ ಶಿಸ್ತುಕ್ರಮ/ 05–06/1862/ ದಿನಾಂಕ:25.08.2006.

2) ಇಲಾಖಾ ವಿಚಾರಣೆಯ ಆದೇಶ ಸಂಖ್ಯೆ: ಕಾನಿಇಂ/ಸಿ–2/ಶಿಸ್ತುಕ್ರಮ/ 2007–08/2362/ ದಿನಾಂಕ:29.08.2007.

3) ಕಾರಣ ಕೇಳುವ ನೋಟೀಸು ಸಂಖ್ಯೆ: ಸನೀವಿ/ಮಂ/ಸಿ–2/ಜವಾನ/ ಶಿಸ್ತುಕ್ರಮ/ 06–07/288/ ದಿನಾಂಕ:31.01.2008.

4) ಶ್ರೀ ಸಿ. ನಾರಾಯಣ, ಜವಾನ, ಆಪಾದಿತ ನೌಕರ ಇವರ ಅಹವಾಲು ದಿನಾಂಕ:08.02.2008.

**ಪ್ರಸ್ತಾವನೆ:**

ಉಲ್ಲೇಖ (1) ಮತ್ತು (2)ರ ಆದೇಶದಂತೆ ಕೆಳಕಂಡ ಸಹಿದಾರರು (ಕಾರ್ಯನಿರ್ವಾಹಕ ಇಂಜಿನಿಯರ್, ಮತ್ತು ಶಿಸ್ತು ಪ್ರಾಧಿಕಾರಿ, ಸಣ್ಣ ನೀರಾವರಿ ವಿಭಾಗ, ಮಂಗಳೂರು) ಶ್ರೀ ಸಿ.ನಾರಾಯಣ, ಜವಾನ, ಇವರ ದಿನಾಂಕ:10.07.2005 ರಿಂದ 31.07.2005ರವರೆಗೆ ಹಾಗೂ 04.10.2005ರಿಂದ 31.01.2006ರ ವರೆಗೆ ಮತ್ತು 01.03.2006 ರಿಂದ 03.12.2007ರವರೆಗೆ ಅನಧಿಕೃತ ಗೈರು ಹಾಜರಾತಿ ಬಗ್ಗೆ ಇಲಾಖಾ ವಿಚಾರಣೆಯನ್ನು ನಡೆಸಿದ್ದರು ಮತ್ತು ಉಲ್ಲೇಖ (3)ರಲ್ಲಿ ವಿಚಾರಣಾ ವರದಿಯನ್ನು ಆಪಾದಿತ ಸರ್ಕಾರಿ ನೌಕರರಿಗೆ ಜಾರಿ ಮಾಡಿದ್ದು, 30 ದಿನಗಳೊಳಗೆ ಆಕ್ಷೇಪಣೆ ಅಥವಾ ಅಹವಾಲು ಸಲ್ಲಿಸಲು ತಿಳಿಸಲಾಗಿತ್ತು.

ಉಲ್ಲೇಖ (4)ರಲ್ಲಿ ಆಪಾದಿತ ಸರ್ಕಾರಿ ನೌಕರರಾದ ಶ್ರೀ ಸಿ. ನಾರಾಯಣ, ಜವಾನರು ತಮ್ಮ ಅಹವಾಲನ್ನು ಸಲ್ಲಿಸಿರುತ್ತಾರೆ. ಸದರಿ ಅಹವಾಲಿನಲ್ಲಿ ದಿನಾಂಕ:10.07.2005 ರಿಂದ 03.12.2007 ರವರೆಗೆ ವಿವಿಧ ಹಂತಗಳಲ್ಲಿ ದೀರ್ಘಾವಧಿಯವರೆಗೆ ಗೈರು ಹಾಜರಾಗಿರುವುದನ್ನು ಒಪ್ಪಿರುತ್ತಾರೆ. ತನ್ನ ತಾಯಿ ಅಸ್ತಮ ಕಾಯಿಲೆಯಿಂದ ಬಳಲುತ್ತಿದ್ದುದರಿಂದ ಮತ್ತು ಅವರ ಆರೈಕೆ ಮಾಡಲು ತನ್ನ ಹೆಂಡತಿ ಸಮ್ಮತಿಸದೆ ಇದ್ದುದರಿಂದ ಗೈರು ಹಾಜರಾಗಬೇಕಾಯಿತು ಎಂದು ತಿಳಿಸಿರುತ್ತಾರೆ. ಗೈರು ಹಾಜರಾದ ಅವಧಿಗೆ ರಜಾ ಅರ್ಜಿ ಕೊಡದೆ ಇರುವುದು ಮತ್ತು ಮನೆ ವಿಳಾಸ ಬದಲಾದ ಬಗ್ಗೆ ಕಛೇರಿಗೆ ತಿಳಿಸದೆ ಇರುವುದು ತಪ್ಪೆಂದು ಒಪ್ಪಿಕೊಂಡಿರುತ್ತಾರೆ. ಇನ್ನು ಮುಂದೆ ಕರ್ತವ್ಯವನ್ನು ನಿಷ್ಠೆಯಿಂದ ಮತ್ತು ಪ್ರಾಮಾಣಿಕತೆಯಿಂದ ನಿರ್ವಹಿಸುತ್ತೇನೆಂದು ಒಪ್ಪಿರುತ್ತಾರೆ. ಹಾಗೂ ಗೈರು ಹಾಜರಿ ಅವಧಿಯನ್ನು ವೇತನ ರಹಿತ ರಜೆಯೆಂದು ಪರಿಗಣಿಸಿ ಸರ್ಕಾರಿ ಸೇವೆಯಲ್ಲಿ ಮುಂದುವರಿಸಬೇಕೆಂದು ಕೇಳಿಕೊಂಡಿರುತ್ತಾರೆ.

ಸದರಿ ನೌಕರರ ವಿರುದ್ಧ ದೋಷಾರೋಪಣೆಯು ವಿಚಾರಣಾ ವರದಿಯಲ್ಲಿ ಸಾಬೀತಾಗಿದ್ದು, ತಮ್ಮ ಅಹವಾಲಿನಲ್ಲಿ ಆಪಾದಿತ ಸರ್ಕಾರಿ ನೌಕರರು ಕೂಡಾ ಒಪ್ಪಿರುವುದರಿಂದ ವಿಚಾರಣಾ ವರದಿಯನ್ನು ಈ ಮೂಲಕ ಒಪ್ಪಲಾಗಿದೆ. ಮತ್ತು ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957ರ 8(iii) ಮತ್ತು ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 18 ಸೇಇವಿ 2001 ಬೆಂಗಳೂರು ದಿನಾಂಕ:14.09.2001ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಕೆಳಕಂಡಂತೆ ಆದೇಶಿಸಿದೆ.

**ಆದೇಶ ಸಂಖ್ಯೆ: ಸನೀವಿ/ಮಂ/ಸಿ–2/ ಜವಾನ/ ಶಿಸ್ತುಕ್ರಮ/ 2007–08/548, ದಿನಾಂಕ:23ನೇ ಫೆಬ್ರವರಿ, 2008**

ಪ್ರಸ್ತಾವನೆಯಲ್ಲಿ ವಿವರಿಸಿದ ಅಂಶಗಳ ಹಿನ್ನಲೆಯಲ್ಲಿ ಶ್ರೀ ಸಿ.ನಾರಾಯಣ, ಜವಾನ, ಅವರಿಗೆ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957ರ ನಿಯಮ 8(iii) ರನ್ವಯ

ಅ) ಮುಂದಿನ 3 ವಾರ್ಷಿಕ ವೇತನ ಬಡ್ತಿಗಳನ್ನು ಸಂಚಿತ ಪರಿಣಾಮ ಬೀರುವಂತೆ ಕೆಳಹಂತಕ್ಕೆ ಇಳಿಸಲಾಗಿದೆ.

ಆ) ಶ್ರೀಯುತರ ಗೈರು ಹಾಜರಿಯನ್ನು ವೇತನ ರಹಿತ ರಜೆಯೆಂದು ಪರಿಗಣಿಸಿದೆ.

**ಎನ್.ಟಿ. ರಾಜಗೋಪಾಲ್**

ಪಿ.ಆರ್.436

ಕಾರ್ಯನಿರ್ವಾಹಕ ಇಂಜಿನಿಯರ್ ಮತ್ತು ಶಿಸ್ತು ಪ್ರಾಧಿಕಾರಿ,
ಸಣ್ಣ ನೀರಾವರಿ ವಿಭಾಗ, ಮಂಗಳೂರು.

## ಸಹಕಾರ ಇಲಾಖೆ

### ಸಹಕಾರ ಸಂಘಗಳ ನಿಬಂಧಕರ ಕಛೇರಿ, ನಂ.1, ಆಲಿ ಆಸ್ಕರ್ ರಸ್ತೆ, ಬೆಂಗಳೂರು–52

**ವಿಷಯ:** ರಾಜ್ಯದಲ್ಲಿರುವ ಗೃಹ ನಿರ್ಮಾಣ ಸಹಕಾರ ಸಂಘಗಳು ಸಮರ್ಪಕವಾಗಿ ಕಾರ್ಯನಿರ್ವಹಿಸಲು ನಿರ್ದೇಶನಗಳನ್ನು ಹೊರಡಿಸುವ ಕುರಿತು.

**ಉಲ್ಲೇಖ:** 1) ಸಹಕಾರ ಸಂಘಗಳ ನಿಬಂಧಕರು, ಬೆಂಗಳೂರು ರವರ ಆದೇಶ ಸಂಖ್ಯೆ: ಹೆಚ್ಎಸ್ಜಿ/70/ ಹೆಚ್ಹೆಚ್ಎಸ್/ 2003–04, ದಿನಾಂಕ:02.08.2003.

2) ಸಹಕಾರ ಸಂಘಗಳ ನಿಬಂಧಕರು, ಬೆಂಗಳೂರು ರವರ ಆದೇಶ ಸಂಖ್ಯೆ: ಹೆಚ್ಎಸ್ಜಿ/69/ಹೆಚ್ಹೆಚ್ಎಸ್/2003–04, ದಿನಾಂಕ:11.02.2005.

3) ಸರ್ಕಾರದ ಅಧಿಸೂಚನೆ ಸಂಖ್ಯೆ: ಸಿಎಂಡಬ್ಲ್ಯೂ/50/ಸಿಎಲ್ಎಂ/ 2000 ದಿನಾಂಕ:19.12.2002.

4) ಸರ್ಕಾರದ ಪತ್ರ ಸಂಖ್ಯೆ: ಸಿಓ/02/ಸಿಎಚ್ಎಸ್/2008, ದಿನಾಂಕ:09.01.2008.

**ಪ್ರಸ್ತಾವನೆ:**

ರಾಜ್ಯದಲ್ಲಿರುವ ಗೃಹ ನಿರ್ಮಾಣ ಸಹಕಾರ ಸಂಘಗಳು ಸಮರ್ಪಕವಾಗಿ ಕಾರ್ಯನಿರ್ವಹಿಸದಿರುವ ಬಗ್ಗೆ ಹಾಗೂ ಅವುಗಳ ಸದಸ್ಯರಿಗೆ ನಿವೇಶನ ಹಂಚಿಕೆಯಲ್ಲಿ ಮೋಸ ಮಾಡುತ್ತಿರುವ ಬಗ್ಗೆ ಸಂಘಗಳ ಸದಸ್ಯರಿಂದ ನಿರಂತರವಾಗಿ ಈ ಕಛೇರಿಯು ದೂರುಗಳು ಹಾಗೂ ಮನವಿಗಳನ್ನು ಸ್ವೀಕರಿಸುತ್ತಿರುವ ಹಿನ್ನೆಲೆಯಲ್ಲಿ ರಾಜ್ಯದಲ್ಲಿರುವ ಗೃಹ ನಿರ್ಮಾಣ ಸಹಕಾರ ಸಂಘಗಳಿಗೆ ಕೆಲವು ನಿರ್ದೇಶನಗಳನ್ನು ನೀಡಿ, ಅವುಗಳು ಸಮರ್ಪಕವಾಗಿ ಕಾರ್ಯನಿರ್ವಹಿಸುವಂತೆ ಮಾಡುವ ಅವಶ್ಯಕತೆಯು ಮತ್ತೊಮ್ಮೆ ಕಂಡುಬಂದಿರುತ್ತದೆ. ಅಲ್ಲದೆ ಈ ಹಿಂದೆ ಬೆಂಗಳೂರು ನಗರ ಜಿಲ್ಲೆಯಲ್ಲಿ ಹೊಸ ಗೃಹ ನಿರ್ಮಾಣ ಸಹಕಾರ ಸಂಘಗಳ ನೋಂದಣಿಯ ಬಗ್ಗೆ ಇದ್ದಂತಹ ನಿರ್ಬಂಧವನ್ನು ಇತ್ತೀಚೆಗೆ ಸರ್ಕಾರವು ತೆಗೆದು ಹಾಕಿರುವ ಹಿನ್ನೆಲೆಯಲ್ಲಿ ಹೊಸದಾಗಿ ನೊಂದಾಯಿತವಾಗುವ ಗೃಹ ನಿರ್ಮಾಣ ಸಹಕಾರ ಸಂಘಗಳು ವ್ಯವಸ್ಥಿತವಾಗಿ ಕಾರ್ಯನಿರ್ವಹಿಸಲು ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 30ಬಿ ರಡಿಯಲ್ಲಿ ಸೂಕ್ತ ನಿರ್ದೇಶನ ನೀಡುವುದು ಅಗತ್ಯವೆಂದು ಪರಿಗಣಿಸಿ ಈ ಕೆಳಕಂಡ ನಿರ್ದೇಶನ ನೀಡಿದೆ.

**ಆದೇಶ**

**ಸಂಖ್ಯೆ: ಹೆಚ್‌ಎಸ್‌ಜಿ–1/184/ ಹೆಚ್‌ಹೆಚ್‌ಎಸ್/ 2007–08, ದಿನಾಂಕ:29ನೇ ಮಾರ್ಚ್, 2008**

ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 30ಬಿ ಹಾಗೂ ಸರ್ಕಾರದ ಅಧಿಸೂಚನೆ ಕ್ರ.ಸಂ. ಸಿಎಂಡಬ್ಲ್ಯೂ/50/ಸಿಎಲ್‌ಎಂ/2000 ದಿನಾಂಕ:19.12.2002ರ ರೀತ್ಯಾ ಗೃಹ ನಿರ್ಮಾಣ ಸಹಕಾರ ಸಂಘಗಳ ಉಪ ನಿಯಮಗಳನ್ನು ನೋಂದಾಯಿಸುವ ಮುನ್ನ ಈ ಕೆಳಕಂಡ ಅಂಶಗಳನ್ನು ಉಪವಿಧಿಗಳಲ್ಲಿ ಅಳವಡಿಸಲು ಎಲ್ಲಾ ನೋಂದಣಿ ಪ್ರಾಧಿಕಾರಿಗಳು ಅಗತ್ಯ ಕ್ರಮವಿಡಲು ಹಾಗೂ ಈಗಾಗಲೇ ನೋಂದಣಿಯಾಗಿರುವ ಗೃಹ ನಿರ್ಮಾಣ ಸಹಕಾರ ಸಂಘಗಳು ತಮ್ಮ ಉಪವಿಧಿಗಳಲ್ಲಿ ಈ ಅಂಶಗಳನ್ನು ಅಳವಡಿಸಿಕೊಳ್ಳಲು ಅಗತ್ಯ ಕ್ರಮವಿಡಲು ನಿರ್ದೇಶಿಸಿದೆ.

1) ಸಂಘದಲ್ಲಿ ನಿವೇಶನಗಳ ಲಭ್ಯತೆಯ ಆಧಾರದ ಮೇಲೆಯೇ ಸದಸ್ಯತ್ವವನ್ನು ನೋಂದಾಯಿಸಲು ಕ್ರಮವಿಡತಕ್ಕದ್ದು. ಆದರೆ ಗೃಹ ನಿರ್ಮಾಣ, ಗೃಹ ಖರೀದಿ, ಮನೆ ರಿಪೇರಿ ಇತ್ಯಾದಿ ಉದ್ದೇಶಕ್ಕಾಗಿ ಸಾಲ ಕೋರಿ ಸದಸ್ಯತ್ವ ಬಯಸುವವರಿಗೆ ಈ ಅಂಶ ಅನ್ವಯಿಸುವುದಿಲ್ಲ.

2) ಸಹಕಾರ ಸಂಘಗಳು ತನ್ನ ಸದಸ್ಯರಿಗೆ ನಿವೇಶನ ಹಂಚಿಕೆ ಮಾಡುವ ಮುನ್ನ ನೈಜ ಸದಸ್ಯರ ಜ್ಯೇಷ್ಠತಾ ಪಟ್ಟಿ ಹಾಗೂ ನಿವೇಶನ ಠೇವಣಿದಾರರ ಜ್ಯೇಷ್ಠತಾ ಪಟ್ಟಿಯನ್ನು ತಯಾರಿಸಿ ಸಹಕಾರ ಸಂಘಗಳ ನಿಬಂಧಕರವರಿಂದ ಕಡ್ಡಾಯವಾಗಿ ಅನುಮೋದನೆಯನ್ನು ಪಡೆಯತಕ್ಕದ್ದು.

3) ಜ್ಯೇಷ್ಠತಾ ಪಟ್ಟಿಯ ಅನುಸಾರ ಸದಸ್ಯರಿಗೆ ನಿವೇಶನ ಹಂಚಿಕೆಯ ಹಂಗಾಮಿ ಹಂಚಿಕೆ ಪತ್ರವನ್ನು ಬಡಾವಣೆ ಕಾಮಗಾರಿ ಪೂರ್ಣಗೊಂಡ ನಂತರವೇ ನೀಡತಕ್ಕದ್ದು. (ಬಡಾವಣೆ ಕಾಮಗಾರಿ ಪೂರ್ಣಗೊಳ್ಳುವ ಮೊದಲೇ ನಿವೇಶನ ನೀಡುವ ಕ್ರಮ ನಿಯಮಗಳ ಉಲ್ಲಂಘನೆಯ ಕ್ರಮವಾಗುವುದಿದ್ದು. ಈ ಕ್ರಮ ಕಾಯ್ದೆಯಡಿ ಶಿಕ್ಷಾರ್ಹ ಅಪರಾಧ ಎಂದು ಪರಿಗಣಿಸಲಾಗುವುದು)

4) ಒಮ್ಮೆ ಸದಸ್ಯರಿಗೆ ನಿವೇಶನ ಹಂಚಿಕೆ ಮಾಡಿ ನೋಂದಾಯಿಸಿಕೊಟ್ಟ ನಂತರ ಯಾವುದೇ ಕಾರಣಕ್ಕೂ ಸಂಘವು ಸದರಿ ನೋಂದಣಿಯನ್ನು ಏಕಪಕ್ಷೀಯವಾಗಿ ರದ್ದು ಮಾಡುವಂತಿಲ್ಲ. ಈ ಬಗ್ಗೆ ಸದಸ್ಯರು ಬರಹದಲ್ಲಿ ಒಪ್ಪಿಗೆ ನೀಡಿದಲ್ಲಿ ನಿಬಂಧಕರಿಂದ ಪೂರ್ವಾನುಮತಿ ಪಡೆದು ರದ್ದುಪಡಿಸಲು ಕ್ರಮವಿಡತಕ್ಕದ್ದು.

5) ಸಂಘದ ಒಟ್ಟು ಸದಸ್ಯರ ಶೇ.10 ರಷ್ಟು ಮಾತ್ರ ಸಹಸದಸ್ಯರನ್ನು ನೋಂದಾಯಿಸಿಕೊಳ್ಳತಕ್ಕದ್ದು ಹಾಗೂ ನಿವೇಶನಗಳ ಹಂಚಿಕೆಯಲ್ಲಿ ಸಹಸದಸ್ಯರಿಗೆ ಶೇ.10ರಷ್ಟು ಮಾತ್ರ ನಿವೇಶನ ನೀಡತಕ್ಕದ್ದು.

6) ಸಂಘದ ಆಡಳಿತ ಮಂಡಳಿಗೆ ನಿವೇಶನ ಹಂಚಿಕೆಯಲ್ಲಿ ಶೇ.5 ರಷ್ಟು ಮಾತ್ರ ವಿವೇಚನಾ ಕೋಟಾ ಇರತಕ್ಕದ್ದು.

7) ಪರಿಶಿಷ್ಟ ಜಾತಿ/ ವರ್ಗದ ಸದಸ್ಯರಿಗೆ ನಿವೇಶನ ಹಂಚಿಕೆಯಲ್ಲಿ ಶೇಕಡಾ 18 ರಷ್ಟು ನಿವೇಶನಗಳನ್ನು ಕಡ್ಡಾಯವಾಗಿ ನೀಡತಕ್ಕದ್ದು.

8) ಗೃಹ ನಿರ್ಮಾಣ ಸಹಕಾರ ಸಂಘಗಳು ಮತ್ತು ಉಪನಿಯಮಗಳಲ್ಲಿ ನಗರಾಭಿವೃದ್ಧಿ ಪ್ರಾಧಿಕಾರ ಅಥವಾ ಭೂ ಸ್ವಾಧೀನದ ಮೂಲಕ ಅಥವಾ ಕರ್ನಾಟಕ ಭೂ ಸುಧಾರಣಾ ಅಧಿನಿಯಮದ ಪ್ರಕರಣ 109 ರಡಿ ಕೃಷಿ ಭೂಮಿಯ ನೇರ ಖರೀದಿ ಮೂಲಕ ಅಥವಾ ಸಂಘದ ಹೆಸರಿನಲ್ಲೇ ಭೂಮಿಯನ್ನು ಸ್ವಾಧೀನಪಡಿಸಿಕೊಳ್ಳುವ ಅಥವಾ ಭೂ ಪರಿವರ್ತನೆಯಾದ ಜಮೀನನ್ನು ಖರೀದಿಸತಕ್ಕದ್ದು.

ಈ ನಿರ್ದೇಶನವನ್ನು ಈ ದಿನ ದಿನಾಂಕ:29.03.2008 ರಂದು ನನ್ನ ರುಜು ಹಾಗೂ ಕಛೇರಿಯ ಮೊಹರಿನೊಂದಿಗೆ ನೀಡಿದೆ.

ಪಿ.ಆರ್.450 ಸಹಕಾರ ಸಂಘಗಳ ನಿಬಂಧಕರು, ಕರ್ನಾಟಕ ರಾಜ್ಯ, ಬೆಂಗಳೂರು.

**ಕರ್ನಾಟಕ ವಿಧಾನಸಭೆ**

**ವಿಧಾನಸಭೆಯ ಸಚಿವಾಲಯ, ಅಂಚೆ ಪೆಟ್ಟಿಗೆ ನಂ.5074, ವಿಧಾನಸೌಧ, ಬೆಂಗಳೂರು**

**ಸಂಖ್ಯೆ: ವಿಸಸ/ಶಾರಶಾ/24/ಸಿಎ/2008, ದಿನಾಂಕ:1ನೇ ಡಿಸೆಂಬರ್, 2008**

**ವಿಷಯ:** ವಿಧಾನಸಭಾ ಸದಸ್ಯರ ವಿಳಾಸದ ಬದಲಾವಣೆಯ ಬಗ್ಗೆ.

ಹೊಳೆನರಸೀಪುರ ವಿಧಾನಸಭಾ ಕ್ಷೇತ್ರದ ಮಾನ್ಯ ಸದಸ್ಯರಾದ **ಶ್ರೀ ಹೆಚ್.ಡಿ. ರೇವಣ್ಣ** ಅವರು ಕೆಳಕಂಡಂತೆ ತಮ್ಮ ವಿಳಾಸವನ್ನು ಬದಲಾಯಿಸಿರುತ್ತಾರೆ.

ಶ್ರೀ ಹೆಚ್.ಡಿ. ರೇವಣ್ಣ

ವಿಧಾನಸಭಾ ಸದಸ್ಯರು, ನಂ.83, ರಾಣೋಜಿರಾವ್ ರಸ್ತೆ, ಬಸವನಗುಡಿ, ಬೆಂಗಳೂರು–560 004.

ಆದಕಾರಣ, ಮಾನ್ಯ ಸದಸ್ಯರಿಗೆ ಇನ್ನು ಮುಂದೆ ಕಳುಹಿಸಲಾಗುವ ಎಲ್ಲಾ ಕಾಗದ ಪತ್ರಗಳನ್ನು ಮೇಲ್ಕಂಡ ವಿಳಾಸಕ್ಕೆ ಕಳುಹಿಸಿಕೊಡಬೇಕೆಂದು ಕೋರಲು ನಿರ್ದೇಶಿತನಾಗಿದ್ದೇನೆ.

**ಕೆ.ಸಿ. ಗೋಪಿಕೃಷ್ಣ**
ಅಧೀನ ಕಾರ್ಯದರ್ಶಿ,
ಕರ್ನಾಟಕ ವಿಧಾನಸಭೆ ಸಚಿವಾಲಯ.

ಪಿ.ಆರ್.8

**ನಗರಾಭಿವೃದ್ಧಿ ಇಲಾಖೆ**

**ಅಧಿಸೂಚನೆ**

**ಸಂಖ್ಯೆ: ನಅಇ 81 ಬೆಮಪ್ರಾ 2009, ಬೆಂಗಳೂರು, ದಿನಾಂಕ:28ನೇ ಫೆಬ್ರವರಿ, 2009**

ಕರ್ನಾಟಕ ನಗರಾಭಿವೃದ್ಧಿ ಪ್ರಾಧಿಕಾರಗಳ ಕಾಯ್ದೆ, 1987ರ ಕಲಂ 19(7) ಮತ್ತು ಕರ್ನಾಟಕ ಭೂ ಸ್ವಾಧೀನ ಕಾಯ್ದೆ, 1894ರ ಕಲಂ 48(1) ರಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಕರ್ನಾಟಕ ಸರ್ಕಾರವು, ಕರ್ನಾಟಕ ನಗರಾಭಿವೃದ್ಧಿ ಪ್ರಾಧಿಕಾರಗಳ ಕಾಯ್ದೆ, 1987ರ ಅಧಿನಿಯಮ 19(1) ಮತ್ತು (2) ರನ್ವಯ ಹುಬ್ಬಳ್ಳಿ–ಧಾರವಾಡ ನಗರಾಭಿವೃದ್ಧಿ ಪ್ರಾಧಿಕಾರವು ವಸತಿ ನಿವೇಶನ ಬಡಾವಣೆಯ ಯೋಜನೆಗಳಿಗಾಗಿ ಭೂ ಸ್ವಾಧೀನಪಡಿಸಿಕೊಳ್ಳಲು ಅಧಿಸೂಚನೆ ಸಂಖ್ಯೆ: ನಅಇ 46 ಬೆಮಪ್ರಾ 2001, ದಿನಾಂಕ:07.11.2003ರಲ್ಲಿ ಅಂತಿಮ ಪ್ರಕಟಣೆ ಹೊರಡಿಸಲಾಗಿದೆ. ಹುಬ್ಬಳ್ಳಿ–ಧಾರವಾಡ ನಗರಾಭಿವೃದ್ಧಿ ಪ್ರಾಧಿಕಾರವು ಸದರಿ ಜಮೀನನ್ನು ಭೂ ಸ್ವಾಧೀನ ಕ್ರಮದಿಂದ ಕೈಬಿಡಲು ನಿರ್ಣಯ ಕೈಗೊಂಡಿರುವುದರಿಂದ ಈ ಕೆಳಕಂಡ ಅನುಸೂಚಿಯಲ್ಲಿ ತೋರಿಸಿರುವ ಜಮೀನುಗಳನ್ನು ಭೂ ಸ್ವಾಧೀನ ಕ್ರಮದಿಂದ ಕೈಬಿಡಲಾಗಿದೆ.

**ಅನುಸೂಚಿ**

**ಜಿಲ್ಲೆ: ಧಾರವಾಡ** **ತಾಲ್ಲೂಕು: ಹುಬ್ಬಳ್ಳಿ** **ಗ್ರಾಮ: ಭೈರಿದೇವರಕೊಪ್ಪ**

| ಕ್ರ. ಸಂ. | ಸ.ನಂ. | ಖಾತಾದಾರರ ಹೆಸರು | ಜಮೀನಿನ ತರಹೆ | ಒಟ್ಟು ವಿಸ್ತೀರ್ಣ ಎ.ಗುಂ. | ಚೆಕ್ಕುಬಂದಿ | | | | ಷರಾ |
|---|---|---|---|---|---|---|---|---|---|
| | | | | | ಪೂರ್ವ | ಪಶ್ಚಿಮ | ಉತ್ತರ | ದಕ್ಷಿಣ | |
| 1. | 310:1 | 1) ಮಾಯಕಾರ<br>2) ಗುರಲಿಂಗಪ್ಪ ತಂದೆ ಮಲ್ಲಪ್ಪ | ಮಸಾರಿ | 2–04–00 | 310:2 | 309 | 311ಬ | ರಸ್ತೆ | |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಸಿ.ಟಿ. ನಾರಾಯಣಸ್ವಾಮಿ**
ಸರ್ಕಾರದ ಅಧೀನ ಕಾರ್ಯದರ್ಶಿ,
ನಗರಾಭಿವೃದ್ಧಿ ಇಲಾಖೆ.

ಪಿ.ಆರ್.234

**ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳ ನಿರ್ದೇಶನಾಲಯದ ನಡವಳಿಗಳು, ಬೆಂಗಳೂರು**

**ವಿಷಯ:** ಶ್ರೀ ಜೆ. ಯೋಗೀಶ್, ದ್ವಿತೀಯ ದರ್ಜೆ ಸಹಾಯಕ, ಪ್ರಾಥಮಿಕ ಆರೋಗ್ಯ ಕೇಂದ್ರ, ಸುರತ್ಕಲ್, ದಕ್ಷಿಣ ಕನ್ನಡ, ಮಂಗಳೂರು, ಇವರ ಲೋಕಾಯುಕ್ತ ಪ್ರಕರಣದ ಬಗ್ಗೆ ಅಂತಿಮ ಆದೇಶ.

**ಉಲ್ಲೇಖ:** 1) ಮುಖ್ಯ ಕಾರ್ಯ ನಿರ್ವಾಹಕ ಅಧಿಕಾರಿ, ದಕ್ಷಿಣ ಕನ್ನಡ, ಜಿಲ್ಲಾ ಪಂಚಾಯತ್, ಮಂಗಳೂರು ಇವರ ಆದೇಶ ಸಂಖ್ಯೆ: ಸಿಬ್ಬಂದಿ (1) ಲಿಪಿಕ:15:2001–02, ದಿನಾಂಕ:08.05.2001.

2) ವಿಶೇಷ ನ್ಯಾಯಾಧೀಶರು, ದಕ್ಷಿಣ ಕನ್ನಡ, ಮಂಗಳೂರು ಇವರು ವಿಶೇಷ ಅರ್ಜಿ ಸಂ:11:2003ರ ಮೇಲೆ ನೀಡಿರುವ ತೀರ್ಪಿನ ದಿನಾಂಕ:31.01.2007.

3) ಈ ನಿರ್ದೇಶನಾಲಯದ ಕಾರಣ ಕೇಳುವ ಸೂಚನಾ ಪತ್ರ ಸಂಖ್ಯೆ: ಡಿಪಿಎನ್(8) ಸಿಆರ್:5:01–02, ದಿನಾಂಕ:15.06.2007.

4) ಸರ್ಕಾರದ ಸುತ್ತೋಲೆ ಸಂಖ್ಯೆ: ಸಿಆಸುಇ:9:ಸೇಇವಿ:95, ಬೆಂಗಳೂರು, ದಿನಾಂಕ:26.06.1996.

5) ಸರ್ಕಾರದ ಪತ್ರ ಸಂಖ್ಯೆ: ಆಕುಕ:360: ಹೆಚ್‌ಎಸ್‌ಎಂ:2004, ದಿನಾಂಕ:24.11.2007.

**ಪ್ರಸ್ತಾವನೆ:**

ಶ್ರೀ ಜಿ. ಯೋಗೀಶ್, ದ್ವಿತೀಯ ದರ್ಜೆ ಸಹಾಯಕ, ಪ್ರಾಥಮಿಕ ಆರೋಗ್ಯ ಕೇಂದ್ರ, ಸೂರತ್ಕಲ್, ದಕ್ಷಿಣ ಕನ್ನಡ, ಮಂಗಳೂರು, ಇವರು ಈ ಹಿಂದೆ ಸಮುದಾಯ ಆರೋಗ್ಯ ಕೇಂದ್ರ, ಮುಲ್ಕಿ, ಮಂಗಳೂರು ತಾ: ಇಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾಗ ಲೋಕಾಯುಕ್ತ ಟ್ರ್ಯಾಪ್ ಪ್ರಕರಣದಲ್ಲಿ ಸಿಲುಕಿಗೊಂಡಿದ್ದು, ಉಲ್ಲೇಖ (1)ರಲ್ಲಿ ಅಮಾನತ್ತು ಮಾಡಲಾಗಿತ್ತು. ವಿಶೇಷ ನ್ಯಾಯಾಧೀಶರು, ದಕ್ಷಿಣ ಕನ್ನಡ ಮಂಗಳೂರು, ಇವರು ಉಲ್ಲೇಖ (2) ರಲ್ಲಿ ಸದರಿ ಪ್ರಕರಣದ ಬಗ್ಗೆ ತೀರ್ಪು ನೀಡಿದ್ದು, ಆರೋಪ ಸಾಬೀತಾಗಿದ್ದಕ್ಕೆ ಸದರಿ ನೌಕರರಿಗೆ ಒಂದು ವರ್ಷಗಳ ಕಾಲ ಸಾದಾಸಜೆ 1000-00 ದಂಡ ವಿಧಿಸಿದ್ದು, ದಂಡ ಕಟ್ಟಲು ವಿಫಲರಾದಲ್ಲಿ, ಒಂದು ತಿಂಗಳ ಸಾದಾಸಜೆ ಅನುಭವಿಸುವಂತೆ ಆದೇಶಿಸಿದ್ದು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು, ಇವರ ಪತ್ರ ಸಂಖ್ಯೆ: ಲೋಕ್: ವಿಎನ್‌ವಿ(ಜಿ) ಎಂ-2:ಸಿಆರ್:2:2001, ಮಂಗಳೂರು, ದಿನಾಂಕ:10.05.2007ರಲ್ಲಿ ಆದೇಶದ ಪ್ರತಿ ಕಳುಹಿಸಿ ಆರೋಪಿತರನ್ನು ಸೇವೆಯಿಂದ ವಜಾಗೊಳಿಸಲು ಕ್ರಮ ಕೈಗೊಳ್ಳುವಂತೆ, ಕೋರಿರುತ್ತಾರೆ. ಸದರಿ ನೌಕರರಿಗೆ ಉಲ್ಲೇಖ (3)ರಲ್ಲಿ ಕೆ.ಸಿ.ಎಸ್ (ಸಿಸಿಎ) ನಿಯಮ 14(1) ರಡಿ ಯಲ್ಲಿ ಏಕೆ ವಜಾ ಮಾಡಬಾರದೆಂದು ಕಾರಣ ಕೇಳುವ ಸೂಚನಾ ಪತ್ರ ಜಾರಿ ಮಾಡಿದ್ದು, ಸದರಿ ಸೂಚನಾ ಪತ್ರ ರದ್ದು ಮಾಡುವಂತೆ, ಅರ್ಜಿ ಸಂಖ್ಯೆ: 3188:2007ರಲ್ಲಿ ಕೆ.ಎ.ಟಿ. ಮೊರೆ ಹೋಗಿರುತ್ತಾರೆ.

ವಿಶೇಷ ನ್ಯಾಯಾಧೀಶರು, ದಕ್ಷಿಣ ಕನ್ನಡ ಮಂಗಳೂರು, ಇವರು ನೀಡಿರುವ ತೀರ್ಪಿನ ವಿರುದ್ಧ ನೌಕರರು ಕರ್ನಾಟಕ ಉಚ್ಚ ನ್ಯಾಯಾಲಯಕ್ಕೆ ಮೇಲ್ಮನವಿ ಸಲ್ಲಿಸಿದ್ದು, ನ್ಯಾಯಾಲಯವು ಕ್ರಿಮಿನಲ್ ಆಪಾದನೆಯ ಅಪೀಲು ಸಂಖ್ಯೆ: 257:2007ರ ಮೇಲೆ ದಿನಾಂಕ:19.02.2007ರಲ್ಲಿ ಸಜೆಗೆ ತಾತ್ಕಾಲಿಕ ತಡೆಯಾಜ್ಞೆ ನೀಡಿದ್ದು, ಈ ಬಗ್ಗೆ ಹಾಗೂ ಕೆ.ಎ.ಟಿ. ಅರ್ಜಿಯ ತೀರ್ಪಿನ ನಂತರ ಲಿಖಿತ ಹೇಳಿಕೆ ನೀಡುವುದಾಗಿ ದಿನಾಂಕ:29.06.2007ರಲ್ಲಿ ನೌಕರರು ಪತ್ರ ಬರೆದಿರುತ್ತಾರೆ. ಉಲ್ಲೇಖ (4)ರ ಸರ್ಕಾರದ ಸುತ್ತೋಲೆಯಲ್ಲಿ ಆಪಾದಿತ ಸರ್ಕಾರಿ ನೌಕರರನ್ನು ಕ್ರಿಮಿನಲ್ ನ್ಯಾಯಾಲಯದ ಆದೇಶದ ವಿರುದ್ಧ ಮೇಲ್ಮನವಿ ಸಲ್ಲಿಸಿದ್ದಾನೆ ಅಥವಾ ಇತರ ವ್ಯವಹಾರಣೆ ಹೂಡಿದ್ದಾರೆ. ಅಥವಾ ಮೇಲಿನ ನ್ಯಾಯಾಲಯವು ಕ್ರಿಮಿನಲ್ ನ್ಯಾಯಾಲಯದ ದಂಡನೆ ಆದೇಶವನ್ನು ನಿಲಂಬನೆಯಲ್ಲಿಟ್ಟಿದೆ.

ಅಥವಾ ಆತನ ಮೇಲ್ಮನವಿ ಇತ್ಯರ್ಥದಲ್ಲಿರುವಾಗ ಜಾಮೀನಿನ ಮೇಲೆ ಬಿಡುಗಡೆ ಪಡೆದಿದ್ದಾರೆ, ಎಂಬ ಕಾರಣಕ್ಕಾಗಿ, ಕೆ.ಸಿ.ಎಸ್ (ಸಿಸಿಎ) ನಿಯಮ 14(1) ರನುಸಾರ ಕ್ರಮ ಜರುಗಿಸುವುದನ್ನು, ತಡೆಹಿಡಿಯಬೇಕಾದ ಅಗತ್ಯವಿಲ್ಲವೆಂದು, ಶಿಸ್ತು ಕ್ರಮ ಕೈಗೊಳ್ಳತಕ್ಕದ್ದು ಎಂದು ಆದೇಶಿಸಲಾಗಿದೆ.

ಈ ಬಗ್ಗೆ ಸರ್ಕಾರದಿಂದ ಸ್ಪಷ್ಟೀಕರಣ ಕೇಳಲಾಗಿ, ಉಲ್ಲೇಖ (5)ರಲ್ಲಿ ಮಾನ್ಯ ಕೆ.ಎ.ಟಿ. ಕೇವಲ ತುರ್ತು ನೋಟೀಸ್ ನೀಡಲು ಆದೇಶಿಸಿದೆ ಹೊರತು ಶಿಸ್ತು ಪ್ರಾಧಿಕಾರ ನೀಡಿದ ನೋಟೀಸ್, ಮೇರೆಗೆ ಪ್ರಾರಂಭಿಸಿದ ಶಿಸ್ತು ಕ್ರಮದ ವಿರುದ್ಧ ತಡೆಯಾಜ್ಞೆ ನೀಡಿರುವುದಿಲ್ಲವಾದುದರಿಂದ ನೌಕರರ ವಿರುದ್ಧ ಸೂಕ್ತ ಕ್ರಮ ಕೈಗೊಳ್ಳಲು ಕಾನೂನಿನ ಅಡಚಣೆ ಇರುವುದಿಲ್ಲವೆಂದು ಸರ್ಕಾರದ ಪತ್ರದಲ್ಲಿ, ತಿಳಿಸಿದ್ದು, ಕೂಲಂಕುಷವಾಗಿ ಪರಿಶೀಲಿಸಿದ ತರುವಾಯ ಸದರಿ ನೌಕರರನ್ನು ಸೇವೆಯಿಂದ ಕಡ್ಡಾಯ ನಿವೃತ್ತಿಗೊಳಿಸಲು ತೀರ್ಮಾನಿಸಿದ್ದು, ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಆದೇಶ ಸಂಖ್ಯೆ: ಡಿಪಿಎನ್ (8) ಸಿಆರ್:5:2001-02, ಬೆಂಗಳೂರು, ದಿನಾಂಕ:5ನೇ ಏಪ್ರಿಲ್, 2008**

ಮೇಲೆ ವಿವರಿಸಿರುವ ಕಾರಣಗಳಿಂದ, 1957ರ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳ ಅಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಡಾ: ಬಿ.ಎಸ್. ಪ್ರೇಮಲೀಲ, ನಿರ್ದೇಶಕರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು, ಬೆಂಗಳೂರು, ಆದ ನಾನು ಶ್ರೀ ಜೆ. ಯೋಗೀಶ್, ದ್ವಿತೀಯ ದರ್ಜೆ ಸಹಾಯಕ, ಪ್ರಾಥಮಿಕ ಆರೋಗ್ಯ ಕೇಂದ್ರ, ಸುರತ್ಕಲ್, ದಕ್ಷಿಣ ಕನ್ನಡ, ಮಂಗಳೂರು, ಇವರನ್ನು ಸದರಿ ನಿಯಮ 8(vi)ರ ಪ್ರಕಾರ ತಕ್ಷಣದಿಂದ ಜಾರಿಗೆ ಬರುವಂತೆ ಸರ್ಕಾರಿ ಸೇವೆಯಿಂದ ಕಡ್ಡಾಯ ನಿವೃತ್ತಿಗೊಳಿಸಿ, ಆದೇಶಿಸಿರುತ್ತೇನೆ.

**ಡಾ: ಬಿ.ಎಸ್. ಪ್ರೇಮಲೀಲ**

ಪಿ.ಆರ್.462

ನಿರ್ದೇಶಕರು,

ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು, ಬೆಂಗಳೂರು-09.

**ಸಹಕಾರ ಸಂಘಗಳ ಅಪರ ನಿಬಂಧಕರು (ಕೈಗಾರಿಕೆ ಮತ್ತು ಇತರೆ) ಸಹಕಾರ ಸಂಘಗಳ ನಿಬಂಧಕರ ಕಛೇರಿ, ನಂ.1, ಆಲಿ ಆಸ್ಕರ್ ರಸ್ತೆ, ಬೆಂಗಳೂರು-560052 ಇವರ ನ್ಯಾಯಾಲಯದಲ್ಲಿ**

**ದಾವಾ ಸಂಖ್ಯೆ: A(I &M ) DIS/ D-2/ 147/ 2007-08**

| ಅರ್ಜಿದಾರರು | ಎದುರು ಅರ್ಜಿದಾರರು |
|---|---|
| ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ರಾಜ್ಯ ಸಹಕಾರಿ ಅಪೆಕ್ಸ್ ಬ್ಯಾಂಕ್ ನಿಯಮಿತ, "ಉತ್ತುಂಗ" ನಂ.1, ಪಂಪಮಹಾಕವಿ ರಸ್ತೆ, ಚಾಮರಾಜಪೇಟೆ, ಬೆಂಗಳೂರು-18. | ವ್ಯವಸ್ಥಾಪಕ ನಿರ್ದೇಶಕರು, ಭವಾನಿ ಖಂಡಸಾರಿ ಶುಗರ್ ಪ್ರೈವೇಟ್ ಲಿಮಿಟೆಡ್, ಬಾರೂರ್ ಗ್ರಾಮ, ಬೀದರ್ ತಾಲ್ಲೂಕು, ಬೀದರ್ ಜಿಲ್ಲೆ. |

**ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 103 ರನ್ವಯ ನೋಟೀಸ್**

ಮೇಲ್ಕಂಡ ಅರ್ಜಿದಾರರು, ಎದುರು ಅರ್ಜಿದಾರರ ವಿರುದ್ಧ ರೂ.3,68,74,438-00ಗಳ ವಸೂಲಾತಿಗೆ ಅರ್ಜಿದಾರರ ಸಹಕಾರ ಬ್ಯಾಂಕು ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 70 ರಡಿ ವ್ಯಾಜ್ಯವನ್ನು ದಾಖಲಿಸಿರುತ್ತಾರೆ.

ಸದರಿ ವ್ಯಾಜ್ಯ ಪ್ರಕರಣದ ವಿಚಾರಣೆ ಸಂದರ್ಭದಲ್ಲಿ ಅರ್ಜಿದಾರರು ದಿನಾಂಕ:31.03.2008ರಂದು ನಡೆದ ವಿಚಾರಣೆಯಲ್ಲಿ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 103ರ ರೀತ್ಯಾ ಎದುರು ಅರ್ಜಿದಾರರ ವಶದಲ್ಲಿರುವ ಸ್ಥಿರಾಸ್ತಿಯನ್ನು ಈ ನ್ಯಾಯಾಲಯದ ಆದೇಶದ ಮುನ್ನ ಜಪ್ತಿ ಆದೇಶ ನೀಡಲು ಈ ನ್ಯಾಯಾಲಯದಲ್ಲಿ ಮಧ್ಯಂತರ ಪರಿಹಾರ ಕೋರಿ ದಿನಾಂಕ:31.03.2008 ರಂದು ಒಂದು (ಐ.ಎ.) ಅರ್ಜಿ ದಾಖಲಿಸಿರುತ್ತಾರೆ.

ಅರ್ಜಿದಾರರು ದಾಖಲು ಮಾಡಿರುವ ಮಧ್ಯಂತರ ಪರಿಹಾರ ಅರ್ಜಿಯನ್ನು ವಿಚಾರಣೆಗೆ ಅಂಗೀಕರಿಸಿದೆ. ಎದುರು ಅರ್ಜಿದಾರರ ವಶದಲ್ಲಿರುವ ಮತ್ತು ಅನುಬಂಧದಲ್ಲಿ ತಿಳಿಸಿರುವ ಸ್ಥಿರ ಮತ್ತು ಚರಾಸ್ತಿಯನ್ನು ಈ ನ್ಯಾಯಾಲಯದಲ್ಲಿ ದಾಖಲು ಮಾಡಿರುವ ವ್ಯಾಜ್ಯದ ಅರ್ಜಿ ಇತ್ಯರ್ಥದ ಆದೇಶ ಪೂರ್ವದಲ್ಲಿ ಸದರಿ ಸ್ಥಿರ ಮತ್ತು ಚರಾಸ್ತಿಯನ್ನು ಷರತ್ತು ಪೂರ್ವ ಜಪ್ತಿ ಮಾಡಿಕೊಂಡಿದೆ. ಸದರಿ ಎದುರು ಅರ್ಜಿದಾರರ ಸ್ಥಿರ ಮತ್ತು ಚರಾಸ್ತಿಯನ್ನು ಜಪ್ತಿ ಮಾಡಿಕೊಂಡಿರುವುದಕ್ಕೆ ಅರ್ಜಿದಾರರ ವ್ಯಾಜ್ಯದ ಬೇಡಿಕೆ ಮೊತ್ತಕ್ಕೆ ಸರಿಸಮಾನವಾಗಿ ಸೂಕ್ತ ಭದ್ರತೆಯನ್ನು ಈ ನ್ಯಾಯಾಲಯಕ್ಕೆ 15 ದಿನಗಳ ಒಳಗಾಗಿ ಸಲ್ಲಿಸಲು ನಿರ್ದೇಶಿಸಿ, ಎದುರು ಅರ್ಜಿದಾರರಿಗೆ ನೋಟೀಸ್ ನೀಡಿದೆ. ಎದುರು ಅರ್ಜಿದಾರರು ನಿಗದಿತ ಅವಧಿಯಲ್ಲಿ ವ್ಯಾಜ್ಯದ ಬೇಡಿಕೆ ಮೊತ್ತಕ್ಕೆ ಅನುಗುಣವಾದ ಸೂಕ್ತ ಭದ್ರತೆಯನ್ನು ಒದಗಿಸಲು ಸೂಚಿಸಿದೆ ಭದ್ರತೆ ಒದಗಿಸಲು ವಿಫಲರಾದಲ್ಲಿ ಎದುರು ಅರ್ಜಿದಾರರ ಆಕ್ಷೇಪಣೆ ಏನೂ ಇಲ್ಲವೆಂದು ಪರಿಗಣಿಸಿ, ಲಭ್ಯವಿರುವ ಸಾಕ್ಷ್ಯಾದಾರಗಳು ಮತ್ತು ಅರ್ಹತೆಯ ಅನುಸಾರ ಎದುರು ಅರ್ಜಿದಾರರ ಸ್ಥಿರ ಮತ್ತು ಚರಾಸ್ತಿಯನ್ನು ಷರತ್ತು ಪೂರ್ವ ಜಪ್ತಿ ಮಾಡಿಕೊಂಡಿರುವುದನ್ನು ಸ್ಥಿರೀಕರಣಗೊಳಿಸಿ ಆದೇಶ ಹೊರಡಿಸಲಾಗುವುದು.

ಈ ವ್ಯಾಜ್ಯದ ಮುಂದಿನ ವಿಚಾರಣೆಯನ್ನು ದಿನಾಂಕ:28.04.2008ರ ಪೂರ್ವಾಹ್ನ 3–00 ಘಂಟೆಗೆ ನಿಗದಿಗೊಳಿಸಿದೆ.

ಈ ನೋಟೀಸನ್ನು ದಿನಾಂಕ:11.04.2008ದಂದು ನನ್ನ ಸ್ವಸಹಿ ಮತ್ತು ನ್ಯಾಯಾಲಯದ ಮೊಹರಿನೊಂದಿಗೆ ನೀಡಲಾಗಿದೆ.

ಸಹಕಾರ ಸಂಘಗಳ ಅಪರ ನಿಬಂಧಕರು, (ಕೈಗಾರಿಕೆ ಮತ್ತು ಇತರೆ)

**ಸಹಕಾರ ಸಂಘಗಳ ಅಪರ ನಿಬಂಧಕರು (ಕೈಗಾರಿಕೆ ಮತ್ತು ಇತರೆ) ಸಹಕಾರ ಸಂಘಗಳ ನಿಬಂಧಕರ ಕಛೇರಿ, ನಂ.1, ಆಲಿ ಆಸ್ಕರ್ ರಸ್ತೆ, ಬೆಂಗಳೂರು–560052 ಇವರ ನ್ಯಾಯಾಲಯದಲ್ಲಿ**

**ದಾವಾ ಸಂಖ್ಯೆ: A(I &M ) DIS/ D-2/ 147/ 2007-08**

**ಅನುಬಂಧ**

**ಶೆಡ್ಯೂಲ್–ಎ**

ಪ್ರತಿವಾದಿಗೆ ಸೇರಿದ ಬೀದರ್ ಜಿಲ್ಲೆ, ಬೀದರ್ ತಾಲ್ಲೂಕ್, ಚಾರೂರು ಗ್ರಾಮದ ಸರ್ವೆ ನಂಬರ್ 289/ಎ–2ರಲ್ಲಿ ಒಟ್ಟು 10 ಎಕರೆ ಜಮೀನು, ಇದಕ್ಕೆ ಚಕ್ಕುಬಂದಿ

**ಈ ಮೇಲ್ಕಂಡ ಆಸ್ತಿಯ ಚಕ್ಕುಬಂದಿ**

**ಪೂರ್ವಕ್ಕೆ:** ಶ್ರೀಮತಿ ಕಲಾವತಿರವರ ಜಮೀನು

**ಪಶ್ಚಿಮಕ್ಕೆ:** ಜಮೀನು ನಂತರ ಗೌಸ್‌ಪುರ ಗ್ರಾಮದ ಸರಹದ್ದು.

**ಉತ್ತರಕ್ಕೆ:** ಮನಹಳ್ಳಿಯಿಂದ ಬೀದರ್‌ಗೆ ಹೋಗುವ ರಸ್ತೆ.

**ದಕ್ಷಿಣಕ್ಕೆ:** ಶ್ರೀಮತಿ ಕಲಾವತಿ ರವರ ಜಮೀನು ಹಾಗೂ ಸರ್ವೆ ನಂ.288ರ ಜಮೀನು.

ಮೇಲ್ಕಂಡ ಜಮೀನಿನಲ್ಲಿ ನಿರ್ಮಿಸಿರುವ ಎಲ್ಲಾ ಕಟ್ಟಡ, ಕಾರ್ಯಾಗಾರ, ಕಾರ್ಖಾನೆ ಹಾಗೂ ಭೂಮಿಗೆ ಜೋಡಿಸಿರುವ ಯಂತ್ರೋಪಕರಣಗಳು ಹಾಗೂ ಭೂಮಿಗೆ ಜೋಡಿಸಿರುವ ಇತರೆ ವಸ್ತು/ ವಸ್ತುಗಳು

**ಶೆಡ್ಯೂಲ್–ಬಿ**

ಶೆಡ್ಯೂಲ್–ಎ ನಲ್ಲಿರುವ ಕಾರ್ಖಾನೆಯ ಗೋದಾಮುಗಳಲ್ಲಿ ದಾಸ್ತಾನು ಮಾಡಿರುವ ಸಕ್ಕರೆ ಹಾಗೂ ಮೊಲಾಸಿಸ್ ಹಾಗೂ ಭೋಗಸ್ಸಯ ಇಡೀ ದಾಸ್ತಾನು.

ಪಿ.ಆರ್.466 ಸಹಕಾರ ಸಂಘಗಳ ಅಪರ ನಿಬಂಧಕರು, (ಕೈಗಾರಿಕೆ ಮತ್ತು ಇತರೆ)

**ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಇಲಾಖೆ**

**ಅಧಿಸೂಚನೆ**

**ಸಂಖ್ಯೆ: ಅಪಜೀ 85 ಹುಸೃಮು 2008, ಬೆಂಗಳೂರು, ದಿನಾಂಕ:24ನೇ ನವೆಂಬರ್, 2008**

ಅರಣ್ಯ, ಇಲಾಖೆಯ ಸೇವೆಗೆ ಸೇರಿದ ಆಡಳಿತ ಅಧಿಕಾರಿ ವೃಂದದ ತಾತ್ಕಾಲಿಕ ಜೇಷ್ಠತಾ ಪಟ್ಟಿಯನ್ನು ದಿನಾಂಕ:01.01.2008ರಲ್ಲಿದ್ದಂತೆ ಈ ಅಧಿಸೂಚನೆಗೆ ಲಗತ್ತಿಸಿರುವ ಅನುಬಂಧದಂತೆ ಈ ಮೂಲಕ ಪ್ರಕಟಿಸಲಾಗಿದೆ. ಈ ತಾತ್ಕಾಲಿಕ ಜೇಷ್ಠತಾ ಪಟ್ಟಿಯಿಂದ ಯಾರಾದರೂ ಬಾಧಿತರಾದಲ್ಲಿ/ ಆಕ್ಷೇಪಣೆಗಳೇನಾದರೂ ಇದ್ದಲ್ಲಿ, ಈ ಅಧಿಸೂಚನೆಯು ಕರ್ನಾಟಕ ರಾಜ್ಯಪತ್ರದಲ್ಲಿ ಪ್ರಕಟವಾದ ಒಂದು ತಿಂಗಳೊಳಗಾಗಿ ಸೂಕ್ತ ದಾಖಲಾತಿಗಳೊಂದಿಗೆ ಸರ್ಕಾರದ ಪ್ರಧಾನ ಕಾರ್ಯದರ್ಶಿ, ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಇಲಾಖೆ, ಬಹುಮಹಡಿ ಕಟ್ಟಡ, ಬೆಂಗಳೂರು ಇವರಿಗೆ ಸಲ್ಲಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಗೋಪಾಲ್**

ಸರ್ಕಾರದ ಅಧೀನ ಕಾರ್ಯದರ್ಶಿ,

ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಇಲಾಖೆ.

**ಅನುಬಂಧ**

**ದಿನಾಂಕ:01.01.2008ರಲ್ಲಿದ್ದಂತೆ ಆಡಳಿತ ಅಧಿಕಾರಿ ವೃಂದದ ಜೇಷ್ಠತಾ ಪಟ್ಟಿ**

| ಕ್ರ. ಸಂ. | ಹೆಸರು ಶ್ರೀಯುತರು | ಆಡಳಿತ ಸಹಾಯಕ ವೃಂದದಲ್ಲಿ ಜೇಷ್ಠತಾ ಕ್ರಮ ಸಂಖ್ಯೆ | ಮೀಸಲಾತಿ ವರ್ಗ | ಜನ್ಮ ದಿನಾಂಕ | ಸೇವೆಗೆ ಸೇರಿದ ದಿನಾಂಕ | ನೈಜವಾಗಿ ಮುಂಬಡ್ತಿ ಹೊಂದಿದ ದಿನಾಂಕ | ನೇಮಕಾತಿಗೆ/ ಜೇಷ್ಠತೆಗೆ ನೈಜವಾದ ಅರ್ಹತಾ ದಿನಾಂಕ |
|---|---|---|---|---|---|---|---|
| 1. | ಪಿ. ವೇದಾಂತಮ್ | 3 | ಪರಿಶಿಷ್ಟ ಜಾತಿ | 25.04.1940 | 29.04.1950 | 10.01.1995 | 04.08.1997 |
| 2. | ವಿಲ್ ಹೆಲ್ಮ್ ಸಕಾದೇವ್ | 13 | ಸಾಮಾನ್ಯ | 04.09.1943 | 01.12.1969 | 10.01.1995 | 04.08.1997 |
| 3. | ಪ್ರತಿಭಾ ಕಡಂಬಿ | 14 | ಸಾಮಾನ್ಯ | 15.09.1942 | 07.03.1969 | 04.08.1997 | 04.08.1997 |
| 4. | ಡಿ.ಪಿ. ಚನ್ನಮಲ್ಲೇಗೌಡ | 15 | ಸಾಮಾನ್ಯ | 25.08.1940 | 23.04.1970 | 30.04.1997 | 04.08.1997 |
| 5. | ಕೆ.ವಿ. ಸೋಮಶೇಖರ್ | 16 | ಸಾಮಾನ್ಯ | 05.09.1944 | 16.04.1970 | 17.08.2000 | 17.08.2000 |
| 6. | ಸಿ. ರಾಜಶೇಖರ್ | 18 | ಸಾಮಾನ್ಯ | 12.06.1944 | 17.06.1970 | 21.08.2000 | 21.08.2000 |
| 7. | ಐ.ಟಿ. ಜೋಗಳೇಕರ್ | 8 | ಪರಿಶಿಷ್ಟ ಜಾತಿ | 10.06.1946 | 29.06.1973 | 29.06.2002 | 29.06.2002 |
| 8. | ಯು.ಬಿ. ಕುಲಕರ್ಣಿ | 23 | ಸಾಮಾನ್ಯ | 19.05.1952 | 01.05.1973 | 30.06.2002 | 09.12.2005 |
| 9. | ಬಿ. ಸದಾನಂದ | 24 | ಸಾಮಾನ್ಯ | 10.01.1950 | 03.05.1973 | 30.06.2002 | 28.08.2007 |
| 10. | ಹೆಚ್. ಫಣಿಯಪ್ಪಯ್ಯ | 28 | ಸಾಮಾನ್ಯ | 18.12.1950 | 05.05.1973 | 19.12.2004 | 28.08.2007 |
| 11. | ಜಿ. ಕೃಷ್ಣಮೂರ್ತಿ | 29 | ಸಾಮಾನ್ಯ | 05.10.1951 | 18.08.1973 | 19.12.2004 | 28.08.2007 |
| 12. | ಕೆ. ವೀರಯ್ಯ | 31 | ಸಾಮಾನ್ಯ | 20.06.1950 | 05.05.1973 | 28.08.2007 | 28.08.2007 |

**ಗೋಪಾಲ್**

ಪಿ.ಆರ್.1364

ಸರ್ಕಾರದ ಅಧೀನ ಕಾರ್ಯದರ್ಶಿ,

ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಇಲಾಖೆ.

**ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ**

**ಅಧಿಸೂಚನೆ**

**ಸಂಖ್ಯೆ: ವಾಕೈ 17 ಜಕೈಸೇ 2008, ಬೆಂಗಳೂರು, ದಿನಾಂಕ:24ನೇ ನವೆಂಬರ್, 2008**

**ವಿಷಯ:** ಕೈಮಗ್ಗ ಮತ್ತು ಜವಳಿ ಇಲಾಖೆಯ ಉಪ ನಿರ್ದೇಶಕರ ಅಂತಿಮ ಜೇಷ್ಠತಾ ಪಟ್ಟಿ ಕುರಿತು.

ಕೈಮಗ್ಗ ಮತ್ತು ಜವಳಿ ಇಲಾಖೆಯ ಉಪ ನಿರ್ದೇಶಕರ ವೃಂದದ ಕರಡು ಜೇಷ್ಠತಾ ಪಟ್ಟಿಯನ್ನು ದಿನಾಂಕ:01.01.2008ರಲ್ಲಿದ್ದಂತೆ ದಿನಾಂಕ:08.09.2008ರಂದು ಪ್ರಕಟಿಸಿ ನಿಗದಿ ಪಡಿಸಿರುವ ಜೇಷ್ಠತೆ ಸಂಬಂಧಿಸಿದಂತೆ ಬಾಧಿತ ಅಧಿಕಾರಿಗಳಿಂದ ಆಕ್ಷೇಪಣೆ/ ಸಲಹೆಗಳಿದ್ದಲ್ಲಿ ಅವುಗಳನ್ನು ಸದರಿ ಅಧಿಸೂಚನೆ ಪ್ರಕಟಿಸಿದ 30 ದಿನಗಳ ಕಾಲಾವಕಾಶ ನೀಡಿ ಕರೆಯಲಾಗಿತ್ತು. ಸರ್ಕಾರವು ಸ್ವೀಕೃತಗೊಂಡ ಆಕ್ಷೇಪಣೆ ಹಾಗೂ ಸಲಹೆಗಳನ್ನು ಪರಿಶೀಲಿಸಿದ್ದು, ಉಪ ನಿರ್ದೇಶಕರ ವೃಂದದ ದಿನಾಂಕ:01.01.2008ರಲ್ಲಿದ್ದಂತೆ ಅಂತಿಮ ಜೇಷ್ಠತಾ ಪಟ್ಟಿಯನ್ನು ಇದಕ್ಕೆ ಲಗತ್ತಿಸಿರುವ ಅನುಬಂಧದಲ್ಲಿ ಪ್ರಕಟಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಸಿ. ರವಿಕುಮಾರ್**

ಪೀಠಾಧಿಕಾರಿ (ಜವಳಿ),

ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ.

**ಅನುಬಂಧ**

**ದಿನಾಂಕ:01.01.2008ರಲ್ಲಿದ್ದಂತೆ ಕೈಮಗ್ಗ ಮತ್ತು ಜವಳಿ ಇಲಾಖೆಯ ಉಪ ನಿರ್ದೇಶಕರ ಅಂತಿಮ ಜೇಷ್ಠತಾ ಪಟ್ಟಿ**

**ವೇತನ ಶ್ರೇಣಿ ರೂ.18150–26925**

**(ಕೈಮಗ್ಗ ಮತ್ತು ಜವಳಿ ಇಲಾಖೆ ಅಸ್ತಿತ್ವಕ್ಕೆ ಬಂದಾಗಿನಿಂದ)**

| ಕ್ರಮ ಸಂಖ್ಯೆ | ಅಧಿಕಾರಿಗಳ ಹೆಸರು ಶ್ರೀಯುತರು: | ಜನ್ಮ ದಿನಾಂಕ | ಸೇವೆಗೆ ಸೇರಿದ ದಿನಾಂಕ | ಪ್ರಸ್ತುತ ಹುದ್ದೆಯಲ್ಲಿ ಮುಂಬಡ್ತಿ ಹೊಂದಿದ ದಿನಾಂಕ |
|---|---|---|---|---|
| 1. | ಝರಪ್ಪ ಜಿ. ಮೊಳಕೇರಿ | 22.12.1960 | 23.09.1985 | 18.08.2005 |

| ಕ್ರಮ ಸಂಖ್ಯೆ | ಅಧಿಕಾರಿಗಳ ಹೆಸರು ಶ್ರೀಯುತರು: | ಜನ್ಮ ದಿನಾಂಕ | ಸೇವೆಗೆ ಸೇರಿದ ದಿನಾಂಕ | ಪ್ರಸ್ತುತ ಹುದ್ದೆಯಲ್ಲಿ ಮುಂಬಡ್ತಿ ಹೊಂದಿದ ದಿನಾಂಕ |
|---|---|---|---|---|
| 2. | ಆನಂದ್ ವಿ. ಕಿತ್ತೂರು | 21.02.1960 | 10.09.1985 | 18.08.2005 |
| 3. | ವಿಜಯ್ ಕುಮಾರ್ ಬಿ. ನಿರಾಳೆ | 30.03.1960 | 10.09.1985 | 18.08.2005 |
| 4. | ಸಿ.ಎಸ್. ಯೋಗೇಶ್ | 22.06.1967 | 07.01.1994 | 18.08.2005 |
| 5. | ಎಸ್. ಪ್ರಕಾಶ್ | 14.04.1966 | 11.07.1994 | 18.08.2005 |
| 6. | ಎ. ಸುರೇಶ್ ಕುಮಾರ್ | 07.06.1965 | 10.01.1994 | 18.08.2005 |
| 7. | ಎಸ್. ಮುದ್ದಯ್ಯ | 01.01.1964 | 15.07.1994 | 18.08.2005 |
| 8. | ಬಿ. ಶ್ರೀಧರ್ ನಾಯಕ್ | 30.04.1970 | 03.01.1970 | 07.01.2006 |
| 9. | ಹೆಚ್.ಎಸ್. ಸೋಮನಗೌಡರ್ | 15.10.1961 | 10.01.1994 | 07.01.2006 |

ಸಂಖ್ಯೆ: ವಾಕೈ 17 ಜಕೈಸೇ 2008, ದಿನಾಂಕ:24.11.2008

**ಸಿ. ರವಿಕುಮಾರ್**
ಪೀಠಾಧಿಕಾರಿ (ಜವಳಿ),
ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ.

ಪಿ.ಆರ್.1354

## ಕಂದಾಯ ಇಲಾಖೆ

## ಅಧಿಸೂಚನೆ

### ಸಂಖ್ಯೆ: ಕಂಇ 76 ಎಲ್‌ಆರ್‌ಎಂ 2008, ಬೆಂಗಳೂರು, ದಿನಾಂಕ:11ನೇ ನವೆಂಬರ್, 2008

ಮ್ಯಾನೇಜಿಂಗ್ ಡೈರೆಕ್ಟರ್, ಸುರೇಶ್ ಅಂಗಡಿ ಎಜ್ಯುಕೇಷನ್ ಫೌಂಡೇಷನ್, ಬೆಳಗಾವಿ, ಇವರು ಬೆಳಗಾವಿ ಜಿಲ್ಲೆಯ, ಬೆಳಗಾವಿ ತಾಲ್ಲೂಕಿನ ಸಾವಗಾಂವ ಗ್ರಾಮದ ಸರ್ವೆ ನಂ.73/4ಅ ಕ್ಷೇತ್ರ 10.03 ಹಾಗೂ ಸ.ನಂ.73/5, ರಲ್ಲಿ 5 ಗುಂಟೆ, ಅಂದರೆ ಒಟ್ಟು 10 ಎಕರೆ 8 ಗುಂಟೆ, ಕೃಷಿ ಜಮೀನನ್ನು ಶೈಕ್ಷಣಕೆ ಉದ್ದೇಶಕ್ಕಾಗಿ ನಮೂನೆ 15–ಎ ಮತ್ತು ನಮೂನೆ–15ಎಎ ಗಳಲ್ಲಿನ ಮಾಹಿತಿ ಅನುಸರಿಸಿ ಪ್ರಾದೇಶಿಕ ಆಯುಕ್ತರು, ಬೆಳಗಾಂ ಜಿಲ್ಲೆ, ಇವರ ಪತ್ರ ಸಂಖ್ಯೆ: ಪ್ರಾಅಬೆ/ಭೂಮಿ–II/ಭೂಸು/ವಿವ–35/08–09, ದಿನಾಂಕ:14/15.01.2008ರಲ್ಲಿ ಪ್ರಸ್ತಾವಿತ ಮೇಲ್ಕಂಡ ಗ್ರಾಮದ ಸರ್ವೆ ನಂ.73/4ಅ ಕ್ಷೇತ್ರ 10.03 ಹಾಗೂ ಸ.ನಂ.73/5, ರಲ್ಲಿ 5 ಗುಂಟೆ, ಅಂದರೆ ಒಟ್ಟು 10 ಎಕರೆ 8 ಗುಂಟೆ ಕೃಷಿ ಜಮೀನನ್ನು ಖರೀದಿಸಲು ಕರ್ನಾಟಕ ಭೂಸುಧಾರಣೆ ಅಧಿನಿಯಮ 1961ರ ಕಲಂ 109(1)ರಡಿ ಅನುಮೋದನೆ/ ವಿನಾಯಿತಿ ನೀಡಲು ಶಿಫಾರಸ್ಸು ಮಾಡಿರುತ್ತಾರೆ.

ಅರ್ಜಿದಾರ ಸಂಸ್ಥೆ ಕಂಪನಿಗಳ ನೊಂದಣಿ ಕಾಯ್ದೆಯನ್ವಯ ನೊಂದಣಿಯಾಗಿರುತ್ತದೆ. ಪ್ರಸ್ತಾಪಿತ ಜಮೀನು ಕರ್ನಾಟಕ ಭೂ ಕಂದಾಯ ಕಾಯ್ದೆ, ಹಲವು ಇನಾಂ ರದ್ಧತಿ ಕಾಯ್ದೆ (ಪಿ.ಟಿ.ಸಿ.ಎಲ್.) ಅಧಿನಿಯಮ 1978, ಕರ್ನಾಟಕ ಭೂ ಮಂಜೂರಾತಿ ನಿಯಮಾವಳಿಗಳು ಹಾಗೂ ಇನ್ನಿತರ ಪರಭಾರೆ ನಿಷೇಧ ಕಾಯ್ದೆಗಳ ವ್ಯಾಪ್ತಿಗೆ ಒಳಪಡುವುದಿಲ್ಲ.

ರಾಜ್ಯ ಸರ್ಕಾರವು ಸಾರ್ವಜನಿಕ ಹಿತಾಸಕ್ತಿಯ ಮೇಲೆ ಕಾರಣಗಳನ್ನು ದಾಖಲಿಸಿ ನಿರ್ದಿಷ್ಟ ಉದ್ದೇಶಕ್ಕಾಗಿ ಎಷ್ಟೇ ವಿಸ್ತೀರ್ಣದ ಭೂಮಿಯನ್ನು ಷರತ್ತು ಮತ್ತು ನಿರ್ಬಂಧನೆಗಳನ್ನು ವಿಧಿಸಿ ಕರ್ನಾಟಕ ಭೂ ಸುಧಾರಣಾ ಅಧಿನಿಯಮ 1961ರ ಕಲಂ 63, 79ಎ, 79ಬಿ ಅಥವಾ 80ರ ಅವಕಾಶಗಳಿಂದ ವಿನಾಯಿತಿ ನೀಡಲು ಸದರಿ ಅಧಿನಿಯಮದ ಕಲಂ 109(1ಎ) ರಡಿ ಅವಕಾಶ ಕಲ್ಪಿಸಿದೆ.

ಈ ಪ್ರಸ್ತಾವನೆಗೆ ಕರ್ನಾಟಕ ಭೂ ಸುಧಾರಣೆ (ತಿದ್ದುಪಡಿ) ಅಧಿನಿಯಮ 1995ರ ಕಲಂ 109(1ಎ) ಮತ್ತು ಕರ್ನಾಟಕ ಭೂ ಸುಧಾರಣೆ (ತಿದ್ದುಪಡಿ) ನಿಯಮಗಳು, 1996ರ ನಿಯಮ 38–ಬಿ ಮತ್ತು 38–ಸಿ ರಲ್ಲಿನ ಷರತ್ತುಗಳನ್ನು ಪೂರೈಸಿದ್ದು ಕರ್ನಾಟಕ ಭೂ ಸುಧಾರಣೆ ಅಧಿನಿಯಮ 1961ರ ಕಲಂ 63, 79ಎ, 79ಬಿ ಮತ್ತು 80ಕ್ಕೆ ವಿನಾಯಿತಿ ನೀಡಿ ಸುರೇಶ್ ಅಂಗಡಿ ಎಜ್ಯುಕೇಷನ್ ಫೌಂಡೇಷನ್ ಇವರಿಗೆ ಬೆಳಗಾವಿ ಜಿಲ್ಲೆಯ ಬೆಳಗಾವಿ ತಾಲ್ಲೂಕು, ಸಾವಗಾಂವ ಗ್ರಾಮದ ಸರ್ವೆ ನಂ.73/4ಅ ಕ್ಷೇತ್ರ 10.03 ಹಾಗೂ ಸ.ನಂ.73/5, ರಲ್ಲಿ 5 ಗುಂಟೆ, ಅಂದರೆ ಒಟ್ಟು 10ಎಕರೆ 8 ಗುಂಟೆ ಕೃಷಿ ಜಮೀನನ್ನು ಶೈಕ್ಷಣಿಕ ಉದ್ದೇಶಕ್ಕಾಗಿ ಖರೀದಿಸಲು ಕರ್ನಾಟಕ ಭೂ ಸುಧಾರಣೆ ಕಾಯ್ದೆ 1961ರ ಕಲಂ 109(1ಎ) ಅಡಿ ಈ ಕೆಳಕಂಡ ಷರತ್ತುಗಳಿಗೆ ಒಳಪಟ್ಟಂತೆ ಸರ್ಕಾರದ ಅನುಮತಿ ನೀಡಲಾಗಿದೆ:

1) ಯಾವ ಉದ್ದೇಶಕ್ಕಾಗಿ ಜಮೀನನ್ನು ಖರೀದಿಸಲು ಅನುಮತಿ ನೀಡಲಾಗಿದೆಯೋ ಅದೇ ಉದ್ದೇಶಕ್ಕಾಗಿ ಸದರಿ ಜಮೀನನ್ನು ಎರಡು ವರ್ಷಗಳೊಳಗಾಗಿ ಉಪಯೋಗಿಸತಕ್ಕದ್ದು. ಮತ್ತು ಆ ಬಗ್ಗೆ ಜಿಲ್ಲಾಧಿಕಾರಿಗಳ ಮುಖಾಂತರ ಸರ್ಕಾರಕ್ಕೆ ಲಿಖಿತವಾಗಿ ಮಾಹಿತಿ ನೀಡತಕ್ಕದ್ದು.

2) ವಿನಾಯಿತಿ ಪಡೆದವರು ಸರ್ಕಾರ ಅಥವಾ ಯಾವುದೇ ಷೆಡ್ಯೂಲ್ ಬ್ಯಾಂಕ್ ಅಥವಾ ಸಹಕಾರಿ, ಕೃಷಿ ಮತ್ತು ಗ್ರಾಮೀಣಾಭಿವೃದ್ಧಿ ಬ್ಯಾಂಕ್ ಒಂದಕ್ಕೆ ಅಥವಾ ಕಂಪನಿ ಕಾಯ್ದೆ, 1956ರ ಕಲಂ 3ರಲ್ಲಿ ಹೇಳಿರುವಂತೆ ಶೇಕಡಾ 51 ಪೇಯ್ಡ್ ಆಫ್ ಷೇರು ಬಂಡವಾಳ ಹೊಂದಿದ ರಾಜ್ಯ ಸರ್ಕಾರ ಅಥವಾ ಕೇಂದ್ರ ಸರ್ಕಾರ ಅಥವಾ ರಾಜ್ಯ ಸರ್ಕಾರದ ನಿಯಂತ್ರಿತ

ಅಥವಾ ಎರಡರ ಹಿಡಿತ ಹೊಂದಿರುವ ಸರ್ಕಾರದ ಸಂಘ/ ಸಂಸ್ಥೆ ಒಂದಕ್ಕೆ ಖಾತರಿ ನೀಡಿ ಅಡಮಾನ ಹಾಗೂ ಇತರೆ ಹೊಣೆ ಮಾಡಿ ಸಾಲ ಪಡೆಯುವುದನ್ನು ಹೊರತುಪಡಿಸಿ ಸದರಿ ಜಮೀನನ್ನು ನಿಗದಿತ ಉದ್ದೇಶಕ್ಕಲ್ಲದೆ ಬೇರೆ ಉದ್ದೇಶಕ್ಕೆ ಬಳಸತಕ್ಕದ್ದಲ್ಲ.

3) ಜಮೀನು ನಗರಾಭಿವೃದ್ಧಿ ಪ್ರಾಧಿಕಾರದ ಸಿ.ಡಿ.ಪಿ./ಒ.ಡಿ.ಪಿ. ವ್ಯಾಪ್ತಿಯೊಳಗೆ ಬಂದರೆ, ಅದರಂತೆ ಅನುಮತಿ ಪಡೆದು ಉಪಯೋಗಿಸತಕ್ಕದ್ದು.

4) ಈ ಅನುಮತಿಯು ಕರ್ನಾಟಕ ಭೂಸುಧಾರಣೆ ಅಧಿನಿಯಮ, 1961ರ ಕಲಂ 109ರನ್ವಯ ವಿನಾಯಿತಿ ಮಾತ್ರವಾಗಿರುತ್ತದೆ. ಬೇರೆ ಕಾನೂನುಗಳ ಉಲ್ಲಂಘನೆಯಾದಲ್ಲಿ ಸಂಬಂಧಿಸಿದ ಕಾಯ್ದೆಯಡಿ ಅಗತ್ಯ ಕ್ರಮ ಜರುಗಿಸಲು ಅವಕಾಶವಿರುತ್ತದೆ.

5) ಈ ಜಮೀನನ್ನು ವ್ಯವಸಾಯದಿಂದ ವ್ಯವಸಾಯೇತರ ಉದ್ದೇಶಕ್ಕಾಗಿ ಪರಿವರ್ತಿಸಿಕೊಳ್ಳಲು ಕರ್ನಾಟಕ ಭೂ ಕಂದಾಯ ಅಧಿನಿಯಮ, 1964ರ ಕಲಂ 95 ರಂತೆ ಜಿಲ್ಲಾಧಿಕಾರಿಗಳಿಂದ ಅನುಮತಿ ಪಡೆಯತಕ್ಕದ್ದು.

6) ಸಂಸ್ಥೆ ನಡೆಸುವ ಚಟುವಟಿಕೆಗಳು ಸ್ಥಳೀಯ ಕಾನೂನು, ಕರ್ನಾಟಕ ಮತ್ತು ಭಾರತದ ಕಾನೂನುಗಳನ್ನು ಪಾಲಿಸತಕ್ಕದ್ದು.

7) ಪ್ರಸ್ತಾಪಿತ ಜಮೀನುಗಳಲ್ಲಿ ಯಾವುದೇ ಅಭಿವೃದ್ಧಿ ಕಾರ್ಯಕೈಗೊಳ್ಳುವ ಮೊದಲು ಜಮೀನಿನ ವಿನ್ಯಾಸಕ್ಕೆ ನಗರ ಯೋಜನಾ ಇಲಾಖೆ/ ಅಭಿವೃದ್ಧಿ ಪ್ರಾಧಿಕಾರ/ ಸ್ಥಳೀಯ ಪ್ರಾಧಿಕಾರಗಳಿಂದ ಅನುಮೋದನೆ ಪಡೆಯತಕ್ಕದ್ದು.

8) ಮೇಲಿನ ಷರತ್ತುಗಳು ಉಲ್ಲಂಘನೆಯಾದಲ್ಲಿ ಈಗ ನೀಡಲಾಗಿರುವ ಅನುಮತಿಯನ್ನು ಕಾನೂನು ರೀತ್ಯ ರದ್ದುಪಡಿಸಲಾಗುವುದು ಮತ್ತು ಪ್ರಸ್ತಾಪಿತ ಭೂಮಿಯನ್ನು ಋಣ ಮುಕ್ತವಾಗಿ ಸರ್ಕಾರದಲ್ಲಿ ನಿಹಿತ ಮಾಡಿಕೊಳ್ಳಲಾಗುವುದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಟಿ.ಎನ್. ನಾರಾಯಣ ಗೌಡ**

ಪಿ.ಆರ್.1357 ಸರ್ಕಾರದ ಅಧೀನ ಕಾರ್ಯದರ್ಶಿ,

ಕಂದಾಯ ಇಲಾಖೆ (ಭೂ ಸುಧಾರಣೆ)

## ನೋಂದಣಿ ಮತ್ತು ಮುದ್ರಾಂಕ ಇಲಾಖೆ

## ಜಿಲ್ಲಾ ನೋಂದಣಾಧಿಕಾರಿಗಳು, ಹಾವೇರಿ ಇವರ ನಡವಳಿಗಳು

**ವಿಷಯ:** ಹಾವೇರಿ ಜಿಲ್ಲೆಯಲ್ಲಿನ ದ್ವಿತೀಯ ದರ್ಜೆ ಸಹಾಯಕರ ಬ್ಯಾಕ್‌ಲಾಗ್ ಹುದ್ದೆಯಲ್ಲಿ ನೇಮಕಗೊಂಡ ಶ್ರೀ ತೋಟಪ್ಪ S/o ಬಸಪ್ಪ ವಸತಿ ಬಾದ್ಯಾಪುರ ಅಂಚೆ ದೇವರಗೋನಾಲ ತಾಲ್ಲೂಕು ಸುರಪುರ ಜಿಲ್ಲೆ ಗುಲ್ಬರ್ಗಾ ಇವರ ನೇಮಕಾತಿ ಆದೇಶವನ್ನು ರದ್ದುಪಡಿಸುವ ಬಗ್ಗೆ.

**ಉಲ್ಲೇಖ:** 1) ಸರ್ಕಾರದ ಅಧಿಸೂಚನೆ ಸಂಖ್ಯೆ:DPAR 13 SBC 2001, ದಿನಾಂಕ:21.11.2001 ರನ್ವಯ ಪ್ರಕಟಿಸಿರುವ ಕೆ.ಸಿ.ಎಸ್. (ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದವರಿಗೆ ಮೀಸಲಿಟ್ಟು ತುಂಬದೇ ಇರುವ ಹುದ್ದೆಗಳ) ವಿಶೇಷ ನೇಮಕಾತಿ ನಿಯಮಗಳು 2001.

2) ನೋಂದಣಿ ಮಹಾಪರಿವೀಕ್ಷಕರು ಮತ್ತು ಮುದ್ರಾಂಕಗಳ ಆಯುಕ್ತರು ಬೆಂಗಳೂರು ಇವರ ರೀ ಅಲಾಟ್‌ಮೆಂಟ್ ಆದೇಶ ಸಂಖ್ಯೆ: ಇ.ಎಸ್.ಟಿ. 1– 273/01–02, ದಿನಾಂಕ:17.11.2007.

3) ಈ ಕಛೇರಿಯ ನೇಮಕಾತಿ ಆದೇಶ ಸಂಖ್ಯೆ: ಸಿಬ್ಬಂದಿ 84/ 2007–08, ದಿನಾಂಕ:20.12.2007.

4) ಉಪ ನೋಂದಣಿ ಕಛೇರಿ ರಾಣೇಬೆನ್ನೂರು ಕಛೇರಿ ಪತ್ರ ನಂ./ಉನೋರಾ ಸಿಬ್ಬಂದಿ/39/08–09, ದಿನಾಂಕ:21.11.2008 ತಲುಪಿದ ದಿನಾಂಕ:27.11.2008.

ನೋಂದಣಿ ಮಹಾಪರಿವೀಕ್ಷಕರು ಮತ್ತು ಮುದ್ರಾಂಕಗಳ ಆಯುಕ್ತರು, ಬೆಂಗಳೂರು ಇವರು ಉಲ್ಲೇಖ (2)ರ ಅವರ ರೀ ಅಲಾಟ್‌ಮೆಂಟ್ ಆರ್ಡರ್‌ನಲ್ಲಿ ಕೆಳಕಂಡ ಅಭ್ಯರ್ಥಿಯನ್ನು ಈ ಜಿಲ್ಲೆಯಲ್ಲಿ ಗುರುತಿಸಲ್ಪಟ್ಟ ಬ್ಯಾಕ್‌ಲಾಗ್ ಹುದ್ದೆಯಲ್ಲಿ ದ್ವಿತೀಯ ದರ್ಜೆ ಸಹಾಯಕರೆಂದು ನೇಮಕಾತಿ ಮಾಡಿಕೊಳ್ಳುವುದಕ್ಕಾಗಿ, ಅಲಾಟ್ ಮಾಡಿದ್ದರ ಮೇರೆ, ಕೆಳಕಂಡ ಅಭ್ಯರ್ಥಿಯನ್ನು ಉಲ್ಲೇಖ (3)ರ ಈ ಕಛೇರಿಯ ಆದೇಶದಲ್ಲಿ ದ್ವಿತೀಯ ದರ್ಜೆ ಸಹಾಯಕರೆಂದು ನೇಮಕ ಮಾಡಿ ಅದೇ ಆದೇಶದಲ್ಲಿ ಕೆಳಕಂಡ ಅಭ್ಯರ್ಥಿಯನ್ನು ಅವರ ಹೆಸರಿನ ಮುಂದೆ ಸೂಚಿಸಿದ ಕಛೇರಿಗೆ ಸ್ಥಳ ನಿಯುಕ್ತಿ ಮಾಡಿ ಸದರಿ ನೇಮಕಾತಿ ಆದೇಶವು ಮುಟ್ಟಿದ ದಿನಾಂಕದಿಂದ ಹದಿನೈದು (15) ದಿನಗಳೊಳಗೆ ನೇಮಕಾತಿ ಮಾಡಿದ ಕಛೇರಿಯಲ್ಲಿ ತಪ್ಪದೇ ಕೆಲಸಕ್ಕೆ ಹಾಜರಾಗುವಂತೆ ಸದರಿ ಅಭ್ಯರ್ಥಿಗೆ ಸೂಚಿಸಿ, ಉಲ್ಲೇಖ (3) ಸದರಿ ನೇಮಕಾತಿ ಆದೇಶವನ್ನು RPAD ಮೂಲಕ ಅಭ್ಯರ್ಥಿಗೆ ಕಳುಹಿಸಲಾಗಿತ್ತು.

| ಕ್ರಮ ಸಂಖ್ಯೆ | ಅಭ್ಯರ್ಥಿಯ ಹೆಸರು ಮತ್ತು ವಿಳಾಸ | ಎಸ್.ಸಿ./ ಎಸ್.ಟಿ. | ಅಭ್ಯರ್ಥಿಯನ್ನು ದ್ವಿತೀಯ ದರ್ಜೆ ಸಹಾಯಕರೆಂದು ನೇಮಕ ಮಾಡಿ ಸ್ಥಳ ನಿಯುಕ್ತಿಗೊಳಿಸಿದ ಕಛೇರಿ | ವರ್ಗೀಕರಣ |
|---|---|---|---|---|
| 1. | ಶ್ರೀ ತೋಟಪ್ಪ S/o ಬಸಪ್ಪ ವಸತಿ ಬಾದ್ಯಾಪುರ, ಅಂಚೆ ದೇವರಗೋನಾಲ ತಾಲ್ಲೂಕು, ಸುರಪುರ, ಜಿಲ್ಲೆ ಗುಲ್ಬರ್ಗಾ. | ಎಸ್.ಟಿ. | ಉಪನೋಂದಣಿ ಕಛೇರಿ ರಾಣೇಬೆನ್ನೂರು | ಪರಿಶಿಷ್ಟ ಪಂಗಡ ಸಾಮಾನ್ಯ ಅರ್ಹತಾ ಅಭ್ಯರ್ಥಿ ಹೆಚ್ಚುವರಿ ಪಟ್ಟಿ. |

ಮೇಲ್ಕಂಡ ಅಭ್ಯರ್ಥಿಯು ಈ ಕಛೇರಿಯ ಉಲ್ಲೇಖ (3)ರ ನೇಮಕಾತಿ ಆದೇಶವನ್ನು ದಿನಾಂಕ:07.01.2008ರಂದು ಸ್ವೀಕರಿಸಿದ್ದರೂ ಸಹ ಸದರಿಯವರು ಅವರನ್ನು ನೇಮಕ ಮಾಡಿದ ಕಛೇರಿಯಲ್ಲಿ ಈ ತಹಲ್‌ವರೆವಿಗೂ ಕೆಲಸಕ್ಕೆ ಹಾಜರಾಗಿರುವುದಿಲ್ಲ. ಕೆಲಸಕ್ಕೆ ಹಾಜರಾಗಲು ಇವರಿಗೆ ನೀಡಿದ ಹದಿನೈದು ದಿನಗಳ ಕಾಲಾವಕಾಶವು ದಿನಾಂಕ:22.01.2008ರಂದು ಮುಕ್ತಾಯವಾಗಿರುತ್ತದೆ. ಉಲ್ಲೇಖ (3)ರ ಈ ಕಛೇರಿಯ ನೇಮಕಾತಿ ಆದೇಶವನ್ನು ಸ್ವೀಕರಿಸಿದ ನಂತರವೂ ಕೆಲಸಕ್ಕೆ ಹಾಜರಾಗಲು ನೀಡಿದ ಹದಿನೈದು ದಿನಗಳ ಕಾಲಾವಕಾಶಕ್ಕಿಂತ ಇನ್ನೂ ಹೆಚ್ಚಿನ ಕಾಲಾವಕಾಶ ನೀಡಬೇಕೆಂದು ಈ ಅಭ್ಯರ್ಥಿಯು ಯಾವುದೇ ರೀತಿಯ ಕೋರಿಕೆಯನ್ನು ಈ ಕಛೇರಿಗೆ ಸಲ್ಲಿಸಿರುವುದಿಲ್ಲ. ಮತ್ತು ಉಲ್ಲೇಖ (4) ರನ್ವಯ ರಾಣೇಬೆನ್ನೂರು ಉಪನೋಂದಣಾಧಿಕಾರಿಗಳು ತಮ್ಮ ಕಛೇರಿಗೆ ಸದರಿ ಅಭ್ಯರ್ಥಿಯು ಈ ವರೆಗೂ ಕರ್ತವ್ಯದ ಮೇಲೆ ಹಾಜರಾಗಿರುವುದಿಲ್ಲವೆಂದು ವರದಿ ಸಲ್ಲಿಸಿದ್ದರಿಂದ ಈ ಮೇರೆಗೆ ಮೇಲ್ಕಂಡ ಅಭ್ಯರ್ಥಿಯ ನೇಮಕಾತಿಯನ್ನು ರದ್ದುಪಡಿಸುವುದು ಸೂಕ್ತವೆಂದು ಮನಗಂಡು ಕೆಳಕಂಡಂತೆ ಆದೇಶ ಹೊರಡಿಸಲಾಗಿದೆ.

**ಆದೇಶ ಸಂಖ್ಯೆ: ಸಿಬ್ಬಂದಿ/84/ 2007–08, ದಿನಾಂಕ:1ನೇ ಡಿಸೆಂಬರ್, 2008**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ ಉಲ್ಲೇಖ (1)ರ ಅಧಿಸೂಚನೆ ಅನ್ವಯ ಹಾಗೂ 1977ರ ಕೆ.ಸಿ.ಎಸ್. (ಸಾಮಾನ್ಯ ನೇಮಕಾತಿ) ನಿಯಮಗಳಲ್ಲಿನ 18 (3)ನೇ ನಿಯಮದನ್ವಯ ಪ್ರದತ್ತವಾದ ಅಧಿಕಾರದ ಮೇರೆಗೆ ಮೇಲ್ಕಂಡ ಅಭ್ಯರ್ಥಿಯಾದ ಶ್ರೀ ತೋಟಪ್ಪ S/o ಬಸಪ್ಪ ವಸತಿ ಬಾದ್ಯಾಪುರ, ಅಂಚೆ ದೇವರಗೋನಾಲ ತಾಲ್ಲೂಕು ಸುರಪುರ, ಜಿಲ್ಲೆ ಗುಲ್ಬರ್ಗಾ ಇವರನ್ನು ಈ ಇಲಾಖೆಯಲ್ಲಿನ ಈ ಜಿಲ್ಲೆಯ ಬ್ಯಾಕ್‌ಲಾಗ್ ಹುದ್ದೆಯಲ್ಲಿ ದ್ವಿತೀಯ ದರ್ಜೆ ಸಹಾಯಕರೆಂದು ನೇಮಕ ಮಾಡಿದ ಈ ಕಛೇರಿಯ ಉಲ್ಲೇಖ (3)ರ ನೇಮಕಾತಿ ಆದೇಶವನ್ನು ಈ ತಕ್ಷಣದಿಂದ ಜಾರಿಗೆ ಬರುವಂತೆ ರದ್ದುಪಡಿಸಲಾಗಿದೆ.

ಮೇಲ್ಕಂಡ ಅಭ್ಯರ್ಥಿಯು ಈ ತಕ್ಷಣದಿಂದ ಈ ಇಲಾಖೆಯಲ್ಲಿನ ಈ ಜಿಲ್ಲೆಯ ದ್ವಿತೀಯ ದರ್ಜೆ ಸಹಾಯಕರ ಹುದ್ದೆಯ ನೇಮಕಾತಿ ಹಕ್ಕನ್ನು ಕಳೆದುಕೊಂಡಿರುವರೆಂದು ಹಾಗೂ ದ್ವಿತೀಯ ದರ್ಜೆ ಸಹಾಯಕರ ಹುದ್ದೆಯ ಮೇಲೆ ಯಾವುದೇ ಹಕ್ಕನ್ನು ಹೊಂದಿರತಕ್ಕದ್ದಲ್ಲವೆಂದು ಹಾಗೂ ಸದರಿಯವರು ದ್ವಿತೀಯ ದರ್ಜೆ ಸಹಾಯಕರ ಹುದ್ದೆಯ ಮೇಲೆ ಯಾವುದೇ ಹಕ್ಕನ್ನು ಸಾಧಿಸತಕ್ಕದ್ದಲ್ಲವೆಂದು ಈ ಮೂಲಕ ಆದೇಶಿಸಿದೆ.

ಪಿ.ಆರ್.1358 ನೇಮಕಾತಿ ಪ್ರಾಧಿಕಾರಿ ಹಾಗೂ ಜಿಲ್ಲಾ ನೋಂದಣಾಧಿಕಾರಿ, ಹಾವೇರಿ ಜಿಲ್ಲೆ, ಹಾವೇರಿ.

**ಯೋಜನೆ, ಕಾರ್ಯಕ್ರಮ ಸಂಯೋಜನೆ ಹಾಗೂ ಸಾಂಖ್ಯಿಕ ಇಲಾಖೆ**

**ಅಧಿಕೃತ ಜ್ಞಾಪನ**

**ಸಂಖ್ಯೆ: ಯೋಇ 55 ಯೋಪರ 2008, ಬೆಂಗಳೂರು, ದಿನಾಂಕ:30ನೇ ಆಗಸ್ಟ್, 2008**

**ವಿಷಯ:** ಕೇಂದ್ರ ಸರ್ಕಾರಕ್ಕೆ ಸಾರ್ವಜನಿಕ ಕುಂದುಕೊರತೆ ನಿವಾರಣಾ ಅರ್ಜಿಗಳನ್ನು ನಿರ್ವಹಿಸುವ ಸಮನ್ವಯ ಅಧಿಕಾರಿ (ನೋಡಲ್ ಅಧಿಕಾರಿ) ನಾಮ ನಿರ್ದೇಶನ ಮಾಡುವ ಕುರಿತು.

**ಉಲ್ಲೇಖ:** (1) ಅ.ಟಿ. ಸಂಖ್ಯೆ: ಸಿಆಸುಇ 84 ಯೋಮಸ 2007, ದಿನಾಂಕ:19.03.2008 ಮತ್ತು 08.07.2008.

ವಿಷಯ ಮತ್ತು ಉಲ್ಲೇಖಗಳಿಗೆ ಸಂಬಂಧಿಸಿದಂತೆ, ಕೇಂದ್ರ ಸರ್ಕಾರಕ್ಕೆ ಸಾರ್ವಜನಿಕ ಕುಂದುಕೊರತೆ ನಿವಾರಣಾ ಅರ್ಜಿಗಳನ್ನು ನಿರ್ವಹಿಸುವ "ಸಮನ್ವಯ ಅಧಿಕಾರಿ (ನೋಡಲ್)" ಎಂದು ನಾಮ ನಿರ್ದೇಶನ ಮಾಡಿ ಕ್ರಮ ತೆಗೆದುಕೊಳ್ಳಲು ಸೂಚಿಸಿರುವ ಹಿನ್ನೆಲೆಯಲ್ಲಿ ಯೋಜನೆ, ಕಾರ್ಯಕ್ರಮ ಸಂಯೋಜನೆ ಮತ್ತು ಸಾಂಖ್ಯಿಕ ಇಲಾಖೆಯ ವತಿಯಿಂದ ಈ ಕೆಳಕಾಣಿಸಿದ ಅಧಿಕಾರಿಯವರನ್ನು "ಸಮನ್ವಯ ಅಧಿಕಾರಿ (ನೋಡಲ್)" ಎಂದು ನಾಮ ನಿರ್ದೇಶನ ಮಾಡಲಾಗಿದ್ದು, ಅವರ ವಿವರಗಳನ್ನು ಈ ಕೆಳಗೆ ನೀಡಲಾಗಿದೆ:

ಶ್ರೀಮತಿ ಸಿ. ಸರೋಜ, ಸರ್ಕಾರದ ಉಪ ಕಾರ್ಯದರ್ಶಿಗಳು, ನಂ.871, 'ಎ' ಟೈಪ್ ಬಿ.ಡಿ.ಎ. ಕ್ವಾರ್ಟರ್ಸ್, ನೀಲಸಂದ್ರ, ಬೆಂಗಳೂರು–560047, ಮನೆ ದೂರವಾಣಿ ಸಂಖ್ಯೆ: 25553121, ಕಛೇರಿ ದೂರವಾಣಿ ಸಂಖ್ಯೆ:22353880.

**ಬಿ. ಚಿಕ್ಕರಾಜು**

ಪಿ.ಆರ್.1051 ಸರ್ಕಾರದ ಅಧೀನ ಕಾರ್ಯದರ್ಶಿ (1 & 2),

ಯೋಜನೆ, ಕಾರ್ಯಕ್ರಮ ಸಂಯೋಜನೆ ಹಾಗೂ ಸಾಂಖ್ಯಿಕ ಇಲಾಖೆ.

## ರಾಜ್ಯ ಚುನಾವಣಾ ಆಯೋಗದ ನಡವಳಿಗಳು

**ವಿಷಯ:** ಮೈಸೂರು ಜಿಲ್ಲೆ, ಮೈಸೂರು ತಾಲ್ಲೂಕು ಪಂಚಾಯತಿ ಸದಸ್ಯ ಸ್ಥಾನಕ್ಕೆ ಗೋಪಾಲಪುರ ತಾಲ್ಲೂಕು ಪಂಚಾಯತಿ ಚುನಾವಣಾ ಕ್ಷೇತ್ರದಿಂದ ಸ್ಪರ್ಧಿಸಿದ್ದ ಶ್ರೀ ಜಿ.ಕೆ. ಬಸವಣ್ಣ ರವರ ತಾಲ್ಲೂಕು ಪಂಚಾಯತಿ ಸದಸ್ಯತ್ವವನ್ನು ಅನರ್ಹಗೊಳಿಸಿದ ಆದೇಶವನ್ನು ಹಿಂಪಡೆಯುವ ಬಗ್ಗೆ.

**ಆದೇಶ ಸಂಖ್ಯೆ: ರಾಚುಆ.119(04) ಟಿಜೆಡ್‌ಪಿ.2007, ಬೆಂಗಳೂರು, ದಿನಾಂಕ:13ನೇ ಮೇ, 2008**

ಮೈಸೂರು ಜಿಲ್ಲೆ, ಮೈಸೂರು ತಾಲ್ಲೂಕು ಪಂಚಾಯತಿ ಸದಸ್ಯ ಸ್ಥಾನಕ್ಕೆ ಗೋಪಾಲಪುರ ತಾಲ್ಲೂಕು ಪಂಚಾಯತಿ ಚುನಾವಣಾ ಕ್ಷೇತ್ರದಿಂದ ಸಾರ್ವತ್ರಿಕ ಚುನಾವಣೆ 2005ರಲ್ಲಿ ಸ್ಪರ್ಧಿಸಿದ್ದ ಶ್ರೀ ಜಿ.ಕೆ. ಬಸವಣ್ಣ ರವರು ಕರ್ನಾಟಕ ಪಂಚಾಯತ್ ರಾಜ್ಯ ಅಧಿನಿಯಮ 1993 (ಇನ್ನು ಮುಂದೆ ಸದರಿ ಅಧಿನಿಯಮ ಎಂದು ಹೇಳಲಾಗುವುದು) ರ ಪ್ರಕರಣ 308–ಬಿ ಹಾಗೂ ಕರ್ನಾಟಕ ಪಂಚಾಯತ್ ರಾಜ್ (ಚುನಾವಣೆಗೆ ಸ್ಪರ್ಧಿಸುವ ಅಭ್ಯರ್ಥಿಗಳ ವೆಚ್ಚ ಮಿತಿ) ನಿಯಮಗಳು 2005ರ ನಿಯಮ 2 ಮತ್ತು ಕರ್ನಾಟಕ ಪಂಚಾಯತ್‌ರಾಜ್ (ಜಿಲ್ಲಾ ಮತ್ತು ತಾಲ್ಲೂಕು ಪಂಚಾಯತಿ ಚುನಾವಣೆಗಳಲ್ಲಿ ಸ್ಪರ್ಧಿಸುವ ಅಭ್ಯರ್ಥಿಗಳ ವೆಚ್ಚ ಮಿತಿ) ಆದೇಶ 2005 (ಇನ್ನು ಮುಂದೆ ಸದರಿ ಅಧಿನಿಯಮ ಎಂದು ಹೇಳಲಾಗುವುದು) ರ ಖಂಡ 3 ರ ಪ್ರಕಾರ, ಚುನಾವಣಾ ವೆಚ್ಚಗಳ ಲೆಕ್ಕಪತ್ರವನ್ನು ನಿಗದಿತ ನಮೂನೆಯಲ್ಲಿ ಚುನಾವಣಾ ಫಲಿತಾಂಶ ಘೋಷಿತವಾದ 30 ದಿನಗಳೊಳಗೆ ಸಲ್ಲಿಸಿರುವುದಿಲ್ಲವೆಂದು ಮೈಸೂರು ಜಿಲ್ಲಾಧಿಕಾರಿಗಳು ವರದಿ ಮಾಡಿದ್ದರು.

ಸದರಿ ಅಧಿನಿಯಮದ ಪ್ರಕರಣ 308–ಸಿ ಹಾಗೂ ಸದರಿ ಆದೇಶದ ಖಂಡ 6 ರ ಉಪಖಂಡ (5) ರನ್ವಯ ದಿನಾಂಕ:08.05.2006 ರಂದು ನೋಟೀಸನ್ನು ಸದರಿ ಅಭ್ಯರ್ಥಿಗೆ ನೀಡಿ ಅವರನ್ನು ಏಕೆ ಅನರ್ಹಗೊಳಿಸಬಾರದು ಎಂಬುದಕ್ಕೆ ನೋಟೀಸು ತಲುಪಿದ 20 ದಿನಗಳೊಳಗಾಗಿ ರಾಜ್ಯ ಚುನಾವಣಾ ಆಯೋಗಕ್ಕೆ ಕಾರಣಗಳನ್ನು ಸಲ್ಲಿಸತಕ್ಕದೆಂದು ತಿಳಿಸಲಾಗಿತ್ತು.

ಮೇಲ್ಕಂಡ ನೋಟೀಸನ್ನು ಶ್ರೀ ಜಿ.ಕೆ. ಬಸವಣ್ಣ ರವರಿಗೆ ಜಾರಿಯಾಗಿದ್ದಾಗ್ಯೂ ಕೂಡ ಅವರು ಆಯೋಗಕ್ಕೆ ಯಾವುದೇ ಉತ್ತರ ನೀಡಿರುವುದಿಲ್ಲ ಹಾಗೂ ಜಿಲ್ಲಾಧಿಕಾರಿಗಳು ಸಹ ಸದರಿ ಅಭ್ಯರ್ಥಿಯು ಚುನಾವಣಾ ವೆಚ್ಚದ ಲೆಕ್ಕ ವಿವರಗಳನ್ನು ಸಲ್ಲಿಸಿಲ್ಲವೆಂದು ತಿಳಿಸಿದ್ದರು.

ಈ ರೀತಿ ಸದರಿ ಅಭ್ಯರ್ಥಿಯು ಸರಿಯಾದ ಕಾರಣ ಅಥವಾ ಸಮರ್ಥನೆಗಳನ್ನು ನೀಡದೇ ಚುನಾವಣಾ ವೆಚ್ಚದ ಲೆಕ್ಕಪತ್ರಗಳನ್ನು ಸಲ್ಲಿಸಲು ವಿಫಲರಾಗಿರುವುದರಿಂದ ರಾಜ್ಯ ಚುನಾವಣಾ ಆಯೋಗವು ಸದರಿ ಅಧಿನಿಯಮದ ಪ್ರಕರಣ 308–ಸಿ ರನ್ವಯ ಶ್ರೀ ಜಿ.ಕೆ. ಬಸವಣ್ಣ ರವರನ್ನು ಆದೇಶ ನಂ. ರಾಚುಆ. 119 (04) ಟಿಜೆಡ್‌ಪಿ 2007 ದಿನಾಂಕ:21.06.2007 ರಂತೆ ಆರು ವರ್ಷಗಳ ಅವಧಿಗೆ ಅನರ್ಹರೆಂದು ಘೋಷಿಸಿತು.

ಶ್ರೀ ಜಿ.ಕೆ. ಬಸವಣ್ಣ ರವರು ಕರ್ನಾಟಕ ಉಚ್ಚ ನ್ಯಾಯಾಲಯದಲ್ಲಿ ರಿಟ್ ಅರ್ಜಿ ಸಂಖ್ಯೆ: 10509/2007 ನ್ನು ದಾಖಲಿಸಿ, ಚುನಾವಣಾ ಆಯೋಗದ ಆದೇಶವನ್ನು ಪ್ರಶ್ನಿಸಿದ್ದರು. ಅವರು ತಮ್ಮ ರಿಟ್ ಅರ್ಜಿಯಲ್ಲಿ ರಾಜ್ಯ ಚುನಾವಣಾ ಆಯೋಗವು ಹೊರಡಿಸಿರುವ ನೋಟೀಸು ಅವರಿಗೆ ಜಾರಿಯಾಗಿರುವುದಿಲ್ಲವೆಂದು ತಿಳಿಸುತ್ತಾ, ಅವರ ಸಹಿಯನ್ನು ಪೋರ್ಜರಿ ಮಾಡಲಾಗಿದೆಯೆಂದು ನ್ಯಾಯಾಲಯದಲ್ಲಿ ತಿಳಿಸಿರುತ್ತಾರೆ. ನ್ಯಾಯಾಲಯವು ಅರ್ಜಿದಾರರು ನ್ಯಾಯಾಲಯಕ್ಕೆ ಸಲ್ಲಿಸಿರುವ ವಕಾಲತ್ತು, ಪ್ರಮಾಣ ಪತ್ರ ಮತ್ತು ಆದಾಯ ತೆರಿಗೆ ಇಲಾಖೆಯವರು ನೀಡಿರುವ PAN ನಲ್ಲಿನ ಸಹಿಗಳನ್ನು ಆಯೋಗವು ನೀಡಿರುವ ನೋಟೀಸಿನಲ್ಲಿ ಅವರದೇ ಎನ್ನಲಾದ ಸಹಿಯೊಂದಿಗೆ ಪರಿಶೀಲನೆ ಮಾಡಿ ಅರ್ಜಿದಾರರು ನ್ಯಾಯಾಲಯಕ್ಕೆ ಸಲ್ಲಿಸಿರುವ ದಾಖಲೆಗಳಲ್ಲಿನ ಸಹಿಗೂ ಹಾಗೂ ಆಯೋಗವು ನೀಡಿರುವ ನೋಟೀಸಿನಲ್ಲಿನ ಅರ್ಜಿದಾರರ ಸಹಿಗಳು ವ್ಯತ್ಯಾಸ ಕಂಡುಬರುವುದಾಗಿ ತಿಳಿಸುತ್ತಾ ದಿನಾಂಕ:03.09.2007 ತನ್ನ ಆದೇಶದಲ್ಲಿ ಆಯೋಗದ ದಿನಾಂಕ:21.06.2007ರ ಆದೇಶವನ್ನು ತಳ್ಳಿಹಾಕುತ್ತಾ ಅರ್ಜಿದಾರರಿಗೆ ಮತ್ತೊಮ್ಮೆ ಹೊಸದಾಗಿ ಅವಕಾಶ ನೀಡಿ ಕಾನೂನು ರೀತ್ಯ ಸೂಕ್ತ ಆದೇಶ ಹೊರಡಿಸುವಂತೆಯೂ ಹಾಗೂ ಶ್ರೀ ಜಿ.ಕೆ. ಬಸವಣ್ಣ ರವರು ದಿನಾಂಕ:17.10.2007ರಂದು ಚುನಾವಣಾ ಆಯೋಗದ ಮುಂದೆ ಹಾಜರಾಗಬೇಕೆಂದು ಆದೇಶಿಸಿತ್ತು. ಉಚ್ಚ ನ್ಯಾಯಾಲಯದ ಆದೇಶದಂತೆ ಶ್ರೀ ಜಿ.ಕೆ. ಬಸವಣ್ಣ ರವರು ದಿನಾಂಕ:18.10.2007ರಂದು ಆಯೋಗದಲ್ಲಿ ಹಾಜರಾಗಿ ಮನವಿ ಸಲ್ಲಿಸಿರುತ್ತಾರೆ. ಸದರಿ ಮನವಿಯಲ್ಲಿ ಆಯೋಗದ ನೋಟೀಸು ಅವರಿಗೆ ತಲುಪದೆ ಬೇರೆಯವರ ಕೈ ಸೇರಿ ಬೇರೆಯವರ ಸಹಿ ಮಾಡಿ ಆಯೋಗಕ್ಕೆ ಹಿಂತಿರುಗಿಸಿರುತ್ತಾರೆ. 6 ವರ್ಷಗಳ ಅವಧಿಗೆ ಅನರ್ಹಗೊಳಿಸಿದ ತಮ್ಮ ಕಛೇರಿಯ ದಿನಾಂಕ:21.06.2007ರ ಆದೇಶ ತಲುಪುವವರೆಗೂ ನೋಟೀಸು ನೀಡಿರುವ ಬಗ್ಗೆ ಅವರಿಗೆ ತಿಳಿದಿರಲಿಲ್ಲವೆಂದು ತಿಳಿಸುತ್ತಾ, ನ್ಯಾಯಾಲಯದ ಆದೇಶದನ್ವಯ ಚುನಾವಣಾ ಲೆಕ್ಕಪತ್ರಗಳನ್ನು ಸಲ್ಲಿಸುತ್ತಿರುವುದಾಗಿ ತಿಳಿಸುತ್ತಾ ಅನರ್ಹಗೊಳಿಸಿರುವ ಆದೇಶವನ್ನು ಕೈ ಬಿಡುವಂತೆ ಕೋರಿರುತ್ತಾರೆ.

ಶ್ರೀ ಜಿ.ಕೆ. ಬಸವಣ್ಣ ರವರ ಹೇಳಿಕೆ ಹಾಗೂ ನ್ಯಾಯಾಲಯದ ಆದೇಶವನ್ನು ಕೂಲಂಕುಷವಾಗಿ ಪರಿಶೀಲಿಸಲಾಗಿದೆ. ನ್ಯಾಯಾಲಯದ ತೀರ್ಪಿನಲ್ಲಿ ಅರ್ಜಿದಾರರು ನ್ಯಾಯಾಲಯದಲ್ಲಿ ಸಲ್ಲಿಸಿರುವ ದಾಖಲೆಗಳಾದ ವಕಾಲತ್ತು, ಪ್ರಮಾಣ ಪತ್ರ ಹಾಗೂ ಆದಾಯ ತೆರಿಗೆ ಇಲಾಖೆಯಿಂದ ನೀಡಿರುವ PAN ದಾಖಲೆಗಳಲ್ಲಿನ ಸಹಿಗೂ ಹಾಗೂ ಆಯೋಗದ ನೋಟೀಸಿನಲ್ಲಿ ಮಾಡಿರುವರೆನ್ನಲಾದ ಸಹಿಗೂ ವ್ಯತ್ಯಾಸ ಕಂಡುಬರುವುದಾಗಿ ತಿಳಿಸಿರುವುದರಿಂದ ಹಾಗೂ ಅರ್ಜಿದಾರರು ದಿನಾಂಕ:17.10.2007ರ ತಮ್ಮ ಮನವಿಯಲ್ಲಿ ಆಯೋಗದ ನೋಟೀಸು ಅವರಿಗೆ ತಲುಪದೆ ಬೇರೆಯವರ ಕೈ ಸೇರಿ ಬೇರೆಯವರು ಸಹಿ ಮಾಡಿ ಆಯೋಗಕ್ಕೆ ಹಿಂತಿರುಗಿಸಿರುವುದಾಗಿ ಹೇಳಿರುವುದನ್ನು ನಂಬಬಹುದಾಗಿದೆ. ಹೀಗಾಗಿ ನೋಟೀಸು

ಜಾರಿಯಾಗದ ಹೊರತು ಲೆಕ್ಕಪತ್ರಗಳನ್ನು ಸಲ್ಲಿಸಿಲ್ಲವೆಂದು ಪರಿಗಣಿಸಿ ಅವರನ್ನು ಅನರ್ಹರೆಂದು ಸದರಿ ನಿಯಮದ ಪ್ರಕರಣ 308ಸಿ ಪ್ರಕಾರ ಘೋಷಿಸಲು ಅವಕಾಶವಿಲ್ಲ. ಅರ್ಜಿದಾರರು ದಿನಾಂಕ:17.10.2007ರ ಮನವಿಯಲ್ಲಿ ದಿನಾಂಕ:21.06.2007ರ ಅನರ್ಹಗೊಳಿಸಿದ ಆದೇಶ ತಲುಪುವವರೆಗೆ ನೋಟೀಸು ನೀಡಿರುವ ಬಗ್ಗೆ ತಮಗೆ ತಿಳಿಯಲೇ ಇಲ್ಲ, ತಿಳಿದಿದ್ದರೆ ನೋಟೀಸು ಪ್ರಕಾರ ನಡೆದುಕೊಳ್ಳುತ್ತಿದ್ದೆ ಎಂದು ತಿಳಿಸಿರುವುದರಿಂದ ಅವರು ಹೇಳಿರುವ ವಿಷಯ ಸುಳ್ಳೆಂದು ತಳ್ಳಿ ಹಾಕಲು ಸಾಧ್ಯವಿಲ್ಲ. ಇದರಿಂದಾಗಿ ಅವರು ಚುನಾವಣಾ ವೆಚ್ಚಗಳನ್ನು ಸಲ್ಲಿಸಿಲ್ಲವೆಂದು ಅವರನ್ನು ಅನರ್ಹರೆಂದು ಘೋಷಿಸಲು ಸಾಧ್ಯವಿಲ್ಲ. ಶ್ರೀ ಜಿ.ಕೆ. ಬಸವಣ್ಣ ರವರು ಚುನಾವಣಾ ವೆಚ್ಚದ ಲೆಕ್ಕಪತ್ರಗಳನ್ನು ಈಗ ಸಲ್ಲಿಸಿದ್ದರೂ ಸಹ ಮೇಲೆ ವಿವರಿಸಿದ ಸಂದರ್ಭದಲ್ಲಿ ಅವರನ್ನು ಅನರ್ಹರೆಂದು ರಾಜ್ಯ ಚುನಾವಣಾ ಆಯೋಗ ಘೋಷಿಸಿದ್ದುದು ಪ್ರಾರಂಭದಿಂದಲೇ ಶೂನ್ಯವಾದ (ab initio void) ಆದೇಶವಾಗಿರುತ್ತದೆ.

ಮೇಲೆ ವಿವರಿಸಿದ ಕಾರಣಗಳಿಂದ ಶ್ರೀ ಜಿ.ಕೆ. ಬಸವಣ್ಣ ರವರನ್ನು ಆದೇಶ ಸಂಖ್ಯೆ: ರಾಚುಆ. 119(04) ಟಿಜೆಡ್‌ಪಿ.2007 ದಿನಾಂಕ:21.06.2007ರ ಆದೇಶವನ್ನು ಈ ಮೂಲಕ ರದ್ದುಗೊಳಿಸಲಾಗಿದೆ.

**ಮ.ರಾ. ಹೆಗಡೆ**

ಪಿ.ಆರ್.542 ಆಯುಕ್ತರು, ರಾಜ್ಯ ಚುನಾವಣಾ ಆಯೋಗ

## ಜಿಲ್ಲಾ ಸಮಾಜ ಕಲ್ಯಾಣ ಅಧಿಕಾರಿಗಳ ಕಛೇರಿ, ರಾಮನಗರ ಜಿಲ್ಲೆ, ರಾಮನಗರ

## ಪ್ರಕಟಣೆ

**ಸಂಖ್ಯೆ: ಜಿಸಕಅ:ರಾ: ಕಾಪದ: ಸಿಆರ್–34:08–09, ದಿನಾಂಕ:25ನೇ ಜುಲೈ, 2008**

**ವಿಷಯ:** 2008–09ನೇ ಸಾಲಿಗೆ ಆಡಳಿತ ನ್ಯಾಯಾಧೀಕರಣ ಯೋಜನೆಯಲ್ಲಿ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ವರ್ಗದ ಕಾನೂನು ಪದವೀಧರರಿಗೆ ತರಬೇತಿ ನೀಡುವ ಬಗ್ಗೆ.

**ಉಲ್ಲೇಖ:** 1) ಸರ್ಕಾರದ ಆದೇಶ ಸಂಖ್ಯೆ: ಎಸ್‌ಡಬ್ಲ್ಯೂಎಲ್ 68 ಎಸ್‌ಇಡಬ್ಲ್ಯೂ 89, ದಿನಾಂಕ:02.11.1990.

2) ಸರ್ಕಾರದ ಆದೇಶ ಸಂಖ್ಯೆ: ಸಕಇ 349 ಪಕವಿ 2005, ದಿನಾಂಕ:28.01.2006.

2008–09ನೇ ಸಾಲಿಗೆ ರಾಮನಗರ ಜಿಲ್ಲೆಯ ತಾಲ್ಲೂಕು ವ್ಯಾಪ್ತಿಯಲ್ಲಿ ಸಮಾಜ ಕಲ್ಯಾಣ ಇಲಾಖಾವತಿಯಿಂದ ಆಡಳಿತ ನ್ಯಾಯಾಧೀಕರಣ ಯೋಜನೆಯಡಿ ತರಬೇತಿ ನೀಡಲು ಪರಿಶಿಷ್ಟ ಜಾತಿ/ ಪರಿಶಿಷ್ಟ ವರ್ಗದ ಕಾನೂನು ಪದವೀಧರರಿಂದ ಅರ್ಜಿಯನ್ನು ಆಹ್ವಾನಿಸಲಾಗಿದೆ. ತರಬೇತಿ ಅವಧಿ 4 ವರ್ಷಗಳಾಗಿದ್ದು, ಮಾಸಿಕ ರೂ.1000/–ಗಳ ಶಿಷ್ಯವೇತನ ನೀಡಲಾಗುವುದು. ತರಬೇತಿಗೆ ಆಯ್ಕೆಯಾದ ಅಭ್ಯರ್ಥಿಯು ಜಿಲ್ಲಾ ಪ್ರಾಸಿಕ್ಯೂಟರ್ ಅಥವಾ 20 ವರ್ಷಕ್ಕಿಂತ ಹೆಚ್ಚಿನ ಅನುಭವ ಹೊಂದಿರುವ ವಕೀಲರ ಬಳಿ ತರಬೇತಿಗೆ ನಿಯೋಜಿಸಲಾಗುವುದು. ಈ ಕೆಳಗೆ ನಮೂದಿಸಿರುವ ಷರತ್ತುಗಳ ಪ್ರಕಾರ ಅರ್ಹ ಅಭ್ಯರ್ಥಿಗಳು ಮಾತ್ರ ಈ ಕೆಳಕಂಡ ಕಛೇರಿಯಲ್ಲಿ ಅರ್ಜಿಗಳನ್ನು ಪಡೆಯಬಹುದು. ಈ ಪ್ರಕಟಣೆಯು ರಾಜ್ಯ ಪತ್ರದಲ್ಲಿ ಪ್ರಕಟಗೊಂಡ ದಿನಾಂಕದಿಂದ ಒಂದು ತಿಂಗಳೊಳಗೆ ಅಥವಾ ದಿನಾಂಕ:22.08.2008ರೊಳಗಡೆ ಸಲ್ಲಿಸತಕ್ಕದ್ದು. ನಂತರ ಬಂದ ಅರ್ಜಿಗಳನ್ನು ಸ್ವೀಕರಿಸಲಾಗುವುದಿಲ್ಲ.

**ಷರತ್ತುಗಳು:**

1) ರಾಮನಗರ ಜಿಲ್ಲಾ ವ್ಯಾಪ್ತಿಗೆ ಬರುವ 4 ತಾಲ್ಲೂಕುಗಳ ಅಭ್ಯರ್ಥಿಗಳು ಮಾತ್ರ ಅರ್ಜಿ ಸಲ್ಲಿಸತಕ್ಕದ್ದು.

2) ಅಭ್ಯರ್ಥಿಯು 35 ವರ್ಷ ವಯೋಮಿತಿಯೊಳಗಿರಬೇಕು.

3) ಅರ್ಜಿ ಸಲ್ಲಿಸಲು ನಿಗದಿಪಡಿಸಿರುವ ಕೊನೆಯ ದಿನಾಂಕಕ್ಕೆ ಎರಡು ವರ್ಷದ ಒಳಗೆ ಕಾನೂನು ಪದವಿಯನ್ನು ಪಡೆದಿರಬೇಕು.

4) ತರಬೇತಿ ಅವಧಿ 4 ವರ್ಷಗಳಾಗಿದ್ದು, ಮಾಸಿಕ ರೂ.1000/– ಗಳ ಶಿಷ್ಯವೇತನ ನೀಡಲಾಗುವುದು.

5) ಆಯ್ಕೆಯಾದ ಅಭ್ಯರ್ಥಿಗಳನ್ನು ಜಿಲ್ಲಾ ಪಬ್ಲಿಕ್ ಪ್ರಾಸಿಕ್ಯೂಟರ್ ಅಥವಾ 20 ವರ್ಷಕ್ಕಿಂತ ಹೆಚ್ಚಿನ ಅನುಭವ ಹೊಂದಿರುವ ಹಿರಿಯ ವಕೀಲರಲ್ಲಿ ತರಬೇತಿಗೆ ನಿಯೋಜಿಸಲಾಗುವುದು.

6) ಆಯ್ಕೆಯಾದ ಅಭ್ಯರ್ಥಿಗಳು ಯಾವುದೇ ಕಾರಣಕ್ಕೂ ತರಬೇತಿಯನ್ನು ಪೂರ್ಣಗೊಳಿಸದೇ ಮಧ್ಯಂತರದಲ್ಲಿ ಬಿಟ್ಟುಹೋಗಬಾರದು. ಬಿಟ್ಟು ಹೋದ ಪಕ್ಷದಲ್ಲಿ ತರಬೇತಿಯ ಅವಧಿಯಲ್ಲಿ ನೀಡಿದ ಶಿಷ್ಯವೇತನವನ್ನು ಶೇ.10ರಷ್ಟು ಬಡ್ಡಿಯೊಂದಿಗೆ ವಸೂಲಿ ಮಾಡಲಾಗುವುದು. ಈ ನಿಯಮ ಕೇಂದ್ರ ಮತ್ತು ರಾಜ್ಯ ಸರ್ಕಾರಿ ಉದ್ದಿಮೆಯಲ್ಲಿ ನೇಮಕ ಹೊಂದುವವರಿಗೆ ಅನ್ವಯಿಸುವುದಿಲ್ಲ.

7) ಸುಳ್ಳು ದಾಖಲೆ, ಮಾಹಿತಿಯನ್ನು ಒದಗಿಸಿ, ಆಯ್ಕೆಯಾದ ಅಭ್ಯರ್ಥಿಗಳನ್ನು ಕಾನೂನಿನನ್ವಯ ಶಿಕ್ಷೆಗೆ ಗುರಿಪಡಿಸಲಾಗುವುದು.

8) ಅರ್ಜಿಯಲ್ಲಿನ ಮಾಹಿತಿಯು ಅಪೂರ್ಣವಾಗಿದ್ದಲ್ಲಿ ಅಂತಹ ಅರ್ಜಿಗಳನ್ನು ಪರಿಗಣಿಸಲಾಗುವುದಿಲ್ಲ.

9) ಆಯ್ಕೆ ಸಮಿತಿಯ ತೀರ್ಮಾನವೇ ಅಂತಿಮ ತೀರ್ಮಾನವಾಗಿರುತ್ತದೆ.

10) ಅರ್ಜಿಗಳನ್ನು ಪಡೆಯಬೇಕಾದ ಮತ್ತು ಸಲ್ಲಿಸಬೇಕಾದ ವಿಳಾಸ ಈ ಕೆಳಕಂಡಂತಿದೆ.

ಜಿಲ್ಲಾ ಸಮಾಜ ಕಲ್ಯಾಣ ಅಧಿಕಾರಿಗಳು, ರಾಮನಗರ ಜಿಲ್ಲೆ, ಕೆಂಪೇಗೌಡ ವೃತ್ತ, ಮಾಗಡಿ ಮುಖ್ಯರಸ್ತೆ,
ರಾಮನಗರ–571511.

ಪಿ.ಆರ್.950 ಜಿಲ್ಲಾ ಸಮಾಜ ಕಲ್ಯಾಣ ಅಧಿಕಾರಿಗಳು, ರಾಮನಗರ ಜಿಲ್ಲೆ, ರಾಮನಗರ.

**ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳ ನಿರ್ದೇಶನಾಲಯದ ನಡವಳಿಗಳು, ಬೆಂಗಳೂರು**

**ವಿಷಯ:** ಶ್ರೀ ಪಿ.ಎಸ್. ನಯಾಜ್, ದ್ವಿತೀಯ ದರ್ಜೆ ಸಹಾಯಕ ಇವರ ಅನಧಿಕೃತ ಗೈರು ಹಾಜರಿ ಬಗ್ಗೆ ಅಂತಿಮ ಆದೇಶ.

**ಓದಲಾಗಿದೆ:** 1) ಜಿಲ್ಲಾ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಅಧಿಕಾರಿಗಳು, ದಾವಣಗೆರೆ ಇವರ ದೋಷಾರೋಪಣೆ ಹಾಗೂ ತಿಳುವಳಿಕೆಯ ಪತ್ರದ ಸಂಖ್ಯೆ: ಜಿಆದಾ:ಸಿಶಾ(2): ವಿಚಾರಣೆ:199:2006–07, ದಿನಾಂಕ:20.09.2006.

2) ನೌಕರರ ಸಮಜಾಯಿಷಿ ದಿನಾಂಕ:12.10.2006.

3) ವಿಚಾರಣಾಧಿಕಾರಿಗಳ ನೇಮಕಾತಿ ಆದೇಶ ಸಂಖ್ಯೆ: ಜಿಆದಾ:ಎಂವಿವಿ: ಸಿಶಾ(2):127:07–08, ದಿನಾಂಕ:12.09.2007.

4) ವಿಚಾರಣಾಧಿಕಾರಿಗಳು ವಿಚಾರಣಾ ವರದಿ ಸಲ್ಲಿಕೆ ದಿನಾಂಕ:10.12.2007.

5) ವಿಚಾರಣಾ ವರದಿ ನೌಕರರಿಗೆ ಜಾರಿ ಮಾಡಿದ ತಿಳುವಳಿಕೆ ಪತ್ರ ಸಂಖ್ಯೆ: ಜಿಆದಾ:ಸಿಶಾ(2):227: 2007–08, ದಿನಾಂಕ:12.02.2008.

6) ನೌಕರರು ವಿಚಾರಣಾ ವರದಿ ಸ್ವೀಕೃತಿ ದಿನಾಂಕ:16.02.2008.

7) ಜಿಲ್ಲಾ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಅಧಿಕಾರಿಗಳು, ದಾವಣಗೆರೆ ಇವರ ಪತ್ರ ಸಂಖ್ಯೆ: ಜಿಆದಾ:ಸಿಶಾ(2):28:2008–09, ದಿನಾಂಕ:14.05.2008 ಮತ್ತು 14.07.2008.

**ಪ್ರಸ್ತಾವನೆ:**

ಶ್ರೀ ಪಿ.ಎಸ್. ನಯಾಜ್, ದ್ವಿತೀಯ ದರ್ಜೆ ಸಹಾಯಕ, ಇವರು ರಾಷ್ಟ್ರೀಯ ಕುಷ್ಠರೋಗ ನಿಯಂತ್ರಣ ಕೇಂದ್ರ, ಹರಪನಹಳ್ಳಿ, ದಾವಣಗೆರೆ ಜಿಲ್ಲೆ, ಇಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾಗ ದಿನಾಂಕ:11.08.2005 ರಿಂದ 10.11.2005ರ ವರೆಗೆ ಮತ್ತು ದಿನಾಂಕ:02.03.2006 ರಿಂದ ಕರ್ತವ್ಯಕ್ಕೆ ಅನಧಿಕೃತ ಗೈರುಹಾಜರಿಯಾಗಿದ್ದು, ಇವರ ಬಗ್ಗೆ ಮೇಲೆ ಓದಲಾದ (1) ರಲ್ಲಿನ ಪತ್ರದಲ್ಲಿ ತಿಳುವಳಿಕೆ ಹಾಗೂ ದೋಷಾರೋಪಣಾ ಪಟ್ಟಿಯನ್ನು ಜಾರಿಗೊಳಿಸಿದ್ದು ಮೇಲೆ ಓದಲಾದ (2) ರಲ್ಲಿ ನೌಕರರು ಆರೋಪಗಳನ್ನು ನಿರಾಕರಿಸಿರುತ್ತಾರೆ. ಮೇಲೆ ಓದಲಾದ (3)ರಲ್ಲಿ ಪ್ರಕರಣದ ಸತ್ಯಾಸತ್ಯತೆಯನ್ನು ಕಂಡುಕೊಳ್ಳಲು ಜಿಲ್ಲಾ ಮಲೇರಿಯಾಧಿಕಾರಿಗಳು, ದಾವಣಗೆರೆ ಇವರನ್ನು ವಿಚಾರಣಾಧಿಕಾರಿಯನ್ನಾಗಿ ನೇಮಿಸಿದ್ದು, ಮೇಲೆ ಓದಲಾದ (4)ರಲ್ಲಿ ವಿಚಾರಣಾಧಿಕಾರಿಗಳು ವಿಚಾರಣಾ ವರದಿ ಸಲ್ಲಿಸಿದ್ದು ಆರೋಪ ರುಜುವಾತಾಗಿದೆಯೆಂದು ತಿಳಿಸಿರುತ್ತಾರೆ. ಮೇಲೆ ಓದಲಾದ (5)ರಲ್ಲಿ ವಿಚಾರಣಾ ವರದಿಯ ಪ್ರತಿಯನ್ನು ನೌಕರರಿಗೆ ಜಾರಿಗೊಳಿಸಿದ್ದು, ದಿನಾಂಕ:16.02.2008ರಲ್ಲಿ ವಿಚಾರಣಾ ವರದಿ ಸ್ವೀಕರಿಸಿದ್ದರೂ ನೌಕರರು ಇದುವರೆವಿಗೂ ಅಹವಾಲನ್ನು ಸಲ್ಲಿಸಿರುವುದಿಲ್ಲ. ಆದುದರಿಂದ ನೌಕರರನ್ನು ವಜಾಗೊಳಿಸಲು ಶಿಫಾರಸ್ಸು ಮಾಡಿ ಜಿಲ್ಲಾ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಅಧಿಕಾರಿಗಳು, ದಾವಣಗೆರೆ ಇವರು ಮೇಲೆ ಓದಲಾದ (7) ರಲ್ಲಿ ಪ್ರಸ್ತಾವನೆ ಸಲ್ಲಿಸಿರುತ್ತಾರೆ.

ಸದರಿ ಪ್ರಸ್ತಾವನೆಯನ್ನು ಪರಿಶೀಲಿಸಲಾಗಿ ನೌಕರರು ಮೇಲ್ಕಂಡ ಅವಧಿಯಲ್ಲದೆ ದಿನಾಂಕ:02.03.2006 ರಿಂದ 29.12.2006 ರವರೆಗೆ, ದಿನಾಂಕ:07.01.2007 ರಿಂದ 10.02.2007ರವರೆಗೆ ದಿನಾಂಕ:18.02.2007 ರಿಂದ 15.04.2007ರವರೆಗೆ, ದಿನಾಂಕ:20.05.2007 ರಿಂದ 10.07.2007ರ ವರೆಗೆ ದಿನಾಂಕ:21.07.2007 ರಿಂದ 24.02.2008ರ ವರೆಗೆ ಮತ್ತು ದಿನಾಂಕ:26.02.2008 ರಿಂದ ಇಲ್ಲಿಯವರೆಗೆ ಅನಧಿಕೃತ ಗೈರುಹಾಜರಿಯಾಗಿದ್ದು, ಸಾಕಷ್ಟು ಕಾಲಾವಕಾಶ ನೀಡಿದ್ದರೂ ಲಿಖಿತ ಅಹವಾಲನ್ನು ಸಲ್ಲಿಸದೇ ಇರುವುದರಿಂದ ವಿಚಾರಣಾಧಿಕಾರಿಗಳು ನೀಡಿರುವ ವಿಚಾರಣಾ ವರದಿ ಹಾಗೂ ಜಿಲ್ಲಾ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಅಧಿಕಾರಿಗಳು, ದಾವಣಗೆರೆ ಇವರ ಶಿಫಾರಸ್ಸನ್ನು ಪರಿಶೀಲಿಸಿದ ತರುವಾಯ ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಆದೇಶ ಸಂಖ್ಯೆ: ಡಿಪಿಎನ್ (23): ಸಿಆರ್:37: 06–07, ಬೆಂಗಳೂರು, ದಿನಾಂಕ:4ನೇ ಸೆಪ್ಟೆಂಬರ್, 2008**

ಮೇಲೆ ವಿವರಿಸಿರುವ ಕಾರಣಗಳಿಂದ 1957ರ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳ ಅಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಡಾ: ಉಷಾ ವಾಸುನಕರ್, ನಿರ್ದೇಶಕರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು, ಬೆಂಗಳೂರು ಆದ ನಾನು ಶ್ರೀ ಸಿ.ಎಸ್. ನಯಾಜ್, ದ್ವಿತೀಯ ದರ್ಜೆ ಸಹಾಯಕ, ರಾಷ್ಟ್ರೀಯ ಕುಷ್ಠರೋಗ ನಿಯಂತ್ರಣ ಕೇಂದ್ರ, ಹರಪನಹಳ್ಳಿ, ದಾವಣಗೆರೆ ಜಿಲ್ಲೆ ಇವರ ಅನಧಿಕೃತ ಗೈರು ಹಾಜರಿಗೆ ದಂಡನೆಯಾಗಿ ಸದರಿ ನಿಯಮ 8(8)ರ ಪ್ರಕಾರ ಮುಂದೆ ಸರ್ಕಾರಿ ಸೇವೆಗೆ ಅನರ್ಹರಾಗುವ ರೀತಿ ತಕ್ಷಣದಿಂದ ಜಾರಿಗೆ ಬರುವಂತೆ ವಜಾಗೊಳಿಸಿ ಆದೇಶಿಸಿರುತ್ತೇನೆ.

**ಡಾ: ಉಷಾ ವಾಸುನ್‌ಕರ್,**

ಪಿ.ಆರ್.1050

ನಿರ್ದೇಶಕರು,

ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು, ಬೆಂಗಳೂರು..

**ಕರ್ನಾಟಕ ರಾಜ್ಯ ಚುನಾವಣಾ ಆಯೋಗದ ನಡವಳಿಗಳು**

**ವಿಷಯ:** ಶ್ರೀ ವಿ.ಪಿ.ನಾಯಕ್ ಬಿನ್ ವೆಂಕಟನಾಯಕ್ ರವರು ಮೈಸೂರು ಜಿಲ್ಲಾ ಪಂಚಾಯತಿ ಸಾರ್ವತ್ರಿಕ ಚುನಾವಣೆ–2005ರಲ್ಲಿ ಟಿ. ನರಸೀಪುರ ತಾಲ್ಲೂಕಿನ ತಲಕಾಡು ಜಿಲ್ಲಾ ಪಂಚಾಯತಿ ಚುನಾವಣಾ ಕ್ಷೇತ್ರದಿಂದ ಸ್ಪರ್ಧಿಸಿ ಚುನಾವಣಾ ವೆಚ್ಚದ ಲೆಕ್ಕ ವಿವರಗಳನ್ನು ಸಲ್ಲಿಸದಿರುವುದರಿಂದ ಕರ್ನಾಟಕ ಪಂಚಾಯತ್ ರಾಜ್ ಅಧಿನಿಯಮ 1993ರ ಪ್ರಕರಣ 308–ಸಿ ಪ್ರಕಾರ ಅನರ್ಹಗೊಳಿಸುವ ಬಗ್ಗೆ.

**ಉಲ್ಲೇಖ:** 1) ಜಿಲ್ಲಾಧಿಕಾರಿಗಳು, ಮೈಸೂರು ಜಿಲ್ಲೆ ರವರ ಪತ್ರದ ಸಂಖ್ಯೆ: ಇಎಲ್ಎನ್ (02) 93/2005–06 ದಿನಾಂಕ:29.03.2006.

2) ಆಯೋಗದ ನೋಟೀಸು ಸಂಖ್ಯೆ: ರಾಚುಆ/152/ಟಿಜಡ್‌ಪಿ/2005, ದಿನಾಂಕ:15.05.2006.

3) ಜಿಲ್ಲಾಧಿಕಾರಿಗಳು, ಮೈಸೂರು ಜಿಲ್ಲೆ ರವರ ಪತ್ರದ ಸಂಖ್ಯೆ: ಇಎಲ್ಎನ್(02)93/2007–08, ದಿನಾಂಕ:01.07.2008.

**ಪ್ರಸ್ತಾವನೆ:**

ಮೈಸೂರು ಜಿಲ್ಲಾ ಪಂಚಾಯತಿ ಸದಸ್ಯ ಸ್ಥಾನಕ್ಕೆ ಟಿ. ನರಸೀಪುರ ತಾಲ್ಲೂಕಿನ ತಲಕಾಡು ಜಿಲ್ಲಾ ಪಂಚಾಯತಿ ಚುನಾವಣಾ ಕ್ಷೇತ್ರದಿಂದ ಸಾರ್ವತ್ರಿಕ ಚುನಾವಣೆ 2005ರಲ್ಲಿ ಸ್ಪರ್ಧಿಸಿದ್ದ ಶ್ರೀ ವಿ.ಪಿ. ನಾಯಕ್ ಬಿನ್ ವೆಂಕಟನಾಯಕ್ ರವರು ಕರ್ನಾಟಕ ಪಂಚಾಯತ್ ರಾಜ್ ಅಧಿನಿಯಮ 1993ರ ಪ್ರಕರಣ 308–ಬಿ ಹಾಗೂ ಕರ್ನಾಟಕ ಪಂಚಾಯತ್‌ರಾಜ್ (ಚುನಾವಣೆಗೆ ಸ್ಪರ್ಧಿಸುವ ಅಭ್ಯರ್ಥಿಗಳ ವೆಚ್ಚ ಮಿತಿ) ನಿಯಮಗಳು 2005ರ ನಿಯಮ 2 ಮತ್ತು ಕರ್ನಾಟಕ ಪಂಚಾಯತ್ ರಾಜ್ (ಜಿಲ್ಲಾ ಮತ್ತು ತಾಲ್ಲೂಕು ಪಂಚಾಯತಿ ಚುನಾವಣೆಗಳಲ್ಲಿ ಸ್ಪರ್ಧಿಸುವ ಅಭ್ಯರ್ಥಿಗಳ ವೆಚ್ಚ ಮಿತಿ) ಆದೇಶ 2005ರ ಖಂಡ 3ರ ಪ್ರಕಾರ, ಚುನಾವಣಾ ವೆಚ್ಚಗಳ ಲೆಕ್ಕ ಪತ್ರವನ್ನು ನಿಗದಿತ ನಮೂನೆಯಲ್ಲಿ ಚುನಾವಣಾ ಫಲಿತಾಂಶ ಘೋಷಿತವಾದ 30 ದಿನಗಳೊಳಗೆ ಸಲ್ಲಿಸಿರುವುದಿಲ್ಲವೆಂದು ಮೈಸೂರು ಜಿಲ್ಲೆಯ ಜಿಲ್ಲಾಧಿಕಾರಿಗಳು ಉಲ್ಲೇಖ (1)ರ ಪತ್ರದಲ್ಲಿ ವರದಿ ಮಾಡಿರುತ್ತಾರೆ.

ಕರ್ನಾಟಕ ಪಂಚಾಯತ್ ರಾಜ್ ಅಧಿನಿಯಮ 1993ರ ಪ್ರಕರಣ 308–ಸಿ ಹಾಗೂ ಕರ್ನಾಟಕ ಪಂಚಾಯತ್ ರಾಜ್ (ಜಿಲ್ಲಾ ಮತ್ತು ತಾಲ್ಲೂಕು ಪಂಚಾಯತಿ ಚುನಾವಣೆಗಳಲ್ಲಿ ಸ್ಪರ್ಧಿಸುವ ಅಭ್ಯರ್ಥಿಗಳ ವೆಚ್ಚ ಮಿತಿ) ಆದೇಶ 2005ರ ಖಂಡ 6ರ ಉಪಖಂಡ 5ರನ್ವಯ ಆಯೋಗದಿಂದ ಉಲ್ಲೇಖ (2) ರಂತೆ ದಿನಾಂಕ:15.05.2006ರ ನೋಟೀಸನ್ನು ಅಭ್ಯರ್ಥಿಗೆ ನೀಡಿ ಅವರನ್ನು ಏಕೆ ಅನರ್ಹಗೊಳಿಸಬಾರದು ಎಂಬುದಕ್ಕೆ ನೋಟೀಸು ತಲುಪಿದ 20 ದಿನಗಳೊಳಗಾಗಿ ರಾಜ್ಯ ಚುನಾವಣಾ ಆಯೋಗಕ್ಕೆ ಕಾರಣಗಳನ್ನು ಸಲ್ಲಿಸತಕ್ಕದೆಂದು ತಿಳಿಸಲಾಗಿತ್ತು.

ಮೇಲ್ಕಂಡ ನೋಟೀಸನ್ನು ಜಾರಿ ಮಾಡಿಸಿ, ಜಿಲ್ಲಾಧಿಕಾರಿಗಳು ಜಾರಿಯಾದ ಪ್ರತಿಯನ್ನು ಆಯೋಗಕ್ಕೆ ಕಳುಹಿಸಿರುತ್ತಾರೆ. ಆದಾಗ್ಯೂ ಅಭ್ಯರ್ಥಿಯು ಆಯೋಗಕ್ಕೆ ಯಾವುದೇ ಉತ್ತರವನ್ನು ನೀಡಿರುವುದಿಲ್ಲ. ಹಾಗೂ ಉಲ್ಲೇಖ (3)ರ ಜಿಲ್ಲಾಧಿಕಾರಿಗಳ ವರದಿಯಲ್ಲಿಯೂ ಸಹ ಸದರಿ ಅಭ್ಯರ್ಥಿಯು ಚುನಾವಣಾ ವೆಚ್ಚದ ಲೆಕ್ಕ ವಿವರಗಳನ್ನು ಸಲ್ಲಿಸಿರುವುದಿಲ್ಲವೆಂದು ತಿಳಿಸಿರುತ್ತಾರೆ.

ಈ ಮೇಲ್ಕಂಡ ಅಂಶಗಳ ಹಿನ್ನೆಲೆಯಲ್ಲಿ ಈ ಪ್ರಕರಣಕ್ಕೆ ಸಂಬಂಧಿಸಿದ ಎಲ್ಲಾ ದಾಖಲೆಗಳನ್ನು ಪರಿಶೀಲಿಸಲಾಗಿ ಅಭ್ಯರ್ಥಿಯು ಚುನಾವಣಾ ವೆಚ್ಚದ ಲೆಕ್ಕ ಪತ್ರಗಳನ್ನು ಸಲ್ಲಿಸದೇ ಇರುವುದಕ್ಕೆ ಸರಿಯಾದ ಕಾರಣ ಅಥವಾ ಸಮರ್ಥನೆಗಳು ಇರುವುದಿಲ್ಲವೆಂದು ದೃಢಪಟ್ಟಿರುತ್ತದೆ. ಕಾರಣ ಈ ಕೆಳಕಂಡಂತೆ ಆದೇಶ.

**ಆದೇಶ ಸಂಖ್ಯೆ: ರಾಚುಆ/ (23)/ ಟಿಜಡ್‌ಪಿ/2007, ಬೆಂಗಳೂರು, ದಿನಾಂಕ:5ನೇ ಆಗಸ್ಟ್, 2008**

ಮೇಲೆ ವಿವರಿಸಿರುವಂತೆ ಮೈಸೂರು ಜಿಲ್ಲಾ ಪಂಚಾಯತಿ ಸದಸ್ಯ ಸ್ಥಾನಕ್ಕೆ ಟಿ. ನರಸೀಪುರ ತಾಲ್ಲೂಕಿನ ತಲಕಾಡು ಜಿಲ್ಲಾ ಪಂಚಾಯತಿ ಚುನಾವಣಾ ಕ್ಷೇತ್ರದಿಂದ ಸಾರ್ವತ್ರಿಕ ಚುನಾವಣೆ 2005ರಲ್ಲಿ ಸ್ಪರ್ಧಿಸಿದ್ದ ಶ್ರೀ ವಿ.ಪಿ. ನಾಯಕ್ ಬಿನ್ ವೆಂಕಟನಾಯಕ್ ಇವರು, ಚುನಾವಣಾ ವೆಚ್ಚದ ಲೆಕ್ಕ ಪತ್ರಗಳನ್ನು ಸಲ್ಲಿಸದೇ ಇರುವುದಕ್ಕೆ ಸರಿಯಾದ ಕಾರಣ ಅಥವಾ ಸಮರ್ಥನೆ ಇಲ್ಲವೆಂದು ದೃಢಪಟ್ಟಿರುವುದರಿಂದ ರಾಜ್ಯ ಚುನಾವಣಾ ಆಯೋಗವು ಅವರನ್ನು ಕರ್ನಾಟಕ ಪಂಚಾಯತ್ ರಾಜ್ ಅಧಿನಿಯಮ 1993ರ ಪ್ರಕರಣ 308–ಸಿ ಅನುಸಾರ ಈ ಆದೇಶದ ದಿನಾಂಕದಿಂದ ಆರು ವರ್ಷಗಳ ಅವಧಿಗೆ ಅನರ್ಹರೆಂದು ಘೋಷಿಸಿರುತ್ತದೆ.

**ಮ.ರಾ. ಹೆಗಡೆ**

ಪಿ.ಆರ್.955

ಆಯುಕ್ತರು,

ರಾಜ್ಯ ಚುನಾವಣಾ ಆಯೋಗ.

**ಆರ್ಥಿಕ ಮತ್ತು ಸಾಂಖ್ಯಿಕ ನಿರ್ದೇಶನಾಲಯ, ಬಹುಮಹಡಿ ಕಟ್ಟಡ, ಬೆಂಗಳೂರು–1**

**ಸಂಖ್ಯೆ:ಆಸಾಂನಿ.57/ಆಡಳಿತ–2/2006–07(ಭಾಗ), ಬೆಂಗಳೂರು, ದಿನಾಂಕ:5ನೇ ಸೆಪ್ಟೆಂಬರ್, 2008**

**ವಿಷಯ:** ಶ್ರೀಮತಿ ಎಸ್.ವಿ. ಮನಗೂಳಿ, ಈ ನಿರ್ದೇಶನಾಲಯದ ಸಾಂಖ್ಯಿಕ ನಿರೀಕ್ಷಕರು ಇವರಿಗೆ ಸಹಾಯಕ ಸಾಂಖ್ಯಿಕ ಅಧಿಕಾರಿಗಳ ಹುದ್ದೆಗೆ ಬಡ್ತಿ ನೀಡಿದ್ದನ್ನು ರದ್ದುಪಡಿಸುವ ಕುರಿತು.

**ಉಲ್ಲೇಖ:** 1) ಈ ನಿರ್ದೇಶನಾಲಯದ ಇದೇ ಕ್ರಮಾಂಕದ ಆದೇಶದ ದಿನಾಂಕ:17.3.2007 ಮತ್ತು ದಿನಾಂಕ 22.10.2007.

2) ಈ ನಿರ್ದೇಶನಾಲಯದ ಇದೇ ಕ್ರಮಾಂಕದ ಜ್ಞಾಪನ ದಿನಾಂಕ 5.4.08.

3) ಮುಖ್ಯ ಅಭಿಯಂತರರು, ಸಂಪರ್ಕ ಮತ್ತು ಕಟ್ಟಡ (ಉತ್ತರ), ಧಾರವಾಡ ಇವರ ಕಚೇರಿ ಆದೇಶ ಸಂಖ್ಯೆ: ಸಿಬಿಎನ್/ಸಿ–2/ಸಸಾವರ್ಗ/ ವಿವ–124/08–09/00779, ದಿನಾಂಕ 28.4.2008.

4) ಈ ನಿರ್ದೇಶನಾಲಯದ ಇದೇ ಕ್ರಮಾಂಕದ ಪತ್ರದ ದಿನಾಂಕ 16.5.08.

5) ಮುಖ್ಯ ಅಭಿಯಂತರರು, ಸಂಪರ್ಕ ಮತ್ತು ಕಟ್ಟಡ (ಉತ್ತರ), ಧಾರವಾಡ ಇವರ ಪತ್ರದ ಸಂಖ್ಯೆ: ಸಂಕ(ಉ)/ಸಿ–2/ಸಸಾಅ/ 124/08–09/02397, ದಿನಾಂಕ 16.6.2008.

6) ಈ ನಿರ್ದೇಶನಾಲಯದ ಇದೇ ಕ್ರಮಾಂಕದ ಅರೆ ಸರ್ಕಾರಿ ಪತ್ರದ ದಿನಾಂಕ 9.7.08.

7) ಮುಖ್ಯ ಅಭಿಯಂತರರು, ಸಂಪರ್ಕ ಮತ್ತು ಕಟ್ಟಡ (ಉತ್ತರ), ಧಾರವಾಡ ಇವರ ಪತ್ರದ ಸಂಖ್ಯೆ: ಸಿಬಿಎನ್/ಸಿ–2/ವಿವ–124/08–09, ದಿನಾಂಕ 22.7.2008 ಕ್ಕೆ ಅಂತ್ಯಗೊಂಡ ಪತ್ರ ವ್ಯವಹಾರ.

**ಪ್ರಸ್ತಾವನೆ:**

ಉಲ್ಲೇಖ (1) ರಲ್ಲಿನ ಈ ನಿರ್ದೇಶನಾಲಯದ ಆದೇಶದ ದಿನಾಂಕ 15.3.2007 ರಲ್ಲಿ ಸಹಾಯಕ ಸಾಂಖ್ಯಿಕ ಅಧಿಕಾರಿಗಳ ಹುದ್ದೆಗೆ ಬಡ್ತಿ ಆದೇಶದಲ್ಲಿದ್ದ ಶ್ರೀಮತಿ ಎಸ್.ವಿ. ಮನಗೂಳಿ, ಈ ನಿರ್ದೇಶನಾಲಯದ ಸಾಂಖ್ಯಿಕ ನಿರೀಕ್ಷಕರು ಪ್ರಸ್ತುತ ಲೋಕೋಪಯೋಗಿ ಇಲಾಖೆ (ಸಂಪರ್ಕ ಮತ್ತು ಕಟ್ಟಡ – ಉತ್ತರ), ಧಾರವಾಡ ಇಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದ ಇವರನ್ನು ಉಲ್ಲೇಖ (1) ರಲ್ಲಿನ ಈ ನಿರ್ದೇಶನಾಲಯದ ಆದೇಶದ ದಿನಾಂಕ 22.10.2007 ರಲ್ಲಿ ಬೆಳಗಾವಿ ನಗರ ಪಾಲಿಕೆಯಲ್ಲಿ ಖಾಲಿ ಇರುವ ಈ ನಿರ್ದೇಶನಾಲಯದಿಂದಲೇ ಭರ್ತಿ ಮಾಡಬಹುದಾದ ಸಹಾಯಕ ಸಾಂಖ್ಯಿಕ ಅಧಿಕಾರಿಗಳ ಹುದ್ದೆಗೆ ನೇಮಕಾತಿ ಮಾಡಲಾಗಿತ್ತು. ಸದರಿ ಶ್ರೀಮತಿ ಎಸ್.ವಿ. ಮನಗೂಳಿ, ಸಾಂಖ್ಯಿಕ ನಿರೀಕ್ಷಕರು ಅವರಿಗೆ ಬಡ್ತಿ ನೀಡಿ ನೇಮಕಾತಿ ಮಾಡಲಾದ ಸ್ಥಳದಲ್ಲಿ / ಕಚೇರಿಯಲ್ಲಿ ಕರ್ತವ್ಯಕ್ಕೆ ಹಾಜರಾಗದೆ ಇದ್ದುದರಿಂದ ಉಲ್ಲೇಖ (2) ರಲ್ಲಿನ ಅವರಿಗೆ ನೀಡಲಾದ ಜ್ಞಾಪನದ ದಿನಾಂಕ 5.4.2008 ರಲ್ಲಿ ಇನ್ನಿತರ ವಿಷಯಗಳೊಂದಿಗೆ "ಅವರಿಗೆ ಬಡ್ತಿ ನೀಡಿ ನೇಮಕಾತಿ ಮಾಡಲಾದ ಆದೇಶದಲ್ಲಿ ನೇಮಕಾತಿ ಮಾಡಲಾದ ಸ್ಥಳದಲ್ಲಿ 15 ದಿನಗಳ ಒಳಗಾಗಿ ಕರ್ತವ್ಯಕ್ಕೆ ವರದಿ ಮಾಡಿಕೊಳ್ಳತಕ್ಕದ್ದೆಂದು, ತಪ್ಪಿದಲ್ಲಿ ಸರ್ಕಾರದ ಅಧಿಸೂಚನೆ ಸಂಖ್ಯೆ: ಡಿಪಿಎಆರ್ / 57 / ಎಸ್.ಆರ್.ಆರ್ /2001, ದಿನಾಂಕ:22.5.2002 ರ ಅನ್ವಯ ಬಡ್ತಿಯನ್ನು ನಿರಾಕರಿಸಿರುತ್ತಾರೆಂದು ಪರಿಗಣಿಸಿ ನಿಯಮಾನುಸಾರ ಕ್ರಮವಹಿಸಲಾಗುವುದೆಂದು ಸ್ಪಷ್ಟಪಡಿಸಲಾಗಿತ್ತೆಂಬುದನ್ನು ವಿವರಿಸಿ, ಇನ್ನೂ ಹೆಚ್ಚಿನ ಅವಕಾಶ ನೀಡಿ ದಿನಾಂಕ 5.4.2008 ರ ಜ್ಞಾಪನ ತಲುಪಿದ 3 ದಿನಗಳ ಒಳಗಾಗಿ ಬಡ್ತಿ ನೀಡಿ ನೇಮಕಾತಿ ಮಾಡಲಾದ ಸ್ಥಳದಲ್ಲಿ / ಕಚೇರಿಯಲ್ಲಿ ಕರ್ತವ್ಯಕ್ಕೆ ವರದಿ ಮಾಡಿಕೊಳ್ಳುವಂತೆ ಅಂತಿಮ ಅವಕಾಶ ನೀಡಲಾಗಿತ್ತು". ದಿನಾಂಕ 5.4.2008 ರ ಜ್ಞಾಪನವನ್ನು ಶ್ರೀಮತಿ ಎಸ್.ವಿ. ಮನಗೂಳಿ, ಸಾಂಖ್ಯಿಕ ನಿರೀಕ್ಷಕರಿಗೆ ನೇರವಾಗಿ ಹಾಗೂ ಜಿಲ್ಲಾ ಸಂಖ್ಯಾ ಸಂಗ್ರಹಣಾಧಿಕಾರಿಗಳ ಕಚೇರಿ, ಧಾರವಾಡ ಇವರ ಮೂಲಕ ಸ್ವೀಕೃತಿಸಿದ್ದರೂ, ಇಂದಿನವರೆಗೂ ಅವರನ್ನು ಬಿಡುಗಡೆಗೊಳಿಸುವ ಕುರಿತು ಮೇಲಧಿಕಾರಿಗಳಿಗೆ ಮನವಿ ಸಲ್ಲಿಸಿರುವ ಕುರಿತು ಅಥವಾ ಅವರನ್ನು ನೇಮಕಾತಿ ಮಾಡಲಾದ ಕಚೇರಿಯಿಂದ ಬೇರೆ ಸ್ಥಳಕ್ಕೆ / ಕಚೇರಿಗೆ ನೇಮಕಾತಿ ಮಾಡಬಹುದಾದ ಕೋರಿಕೆ ಅಥವಾ ಇನ್ನಿತರ ಯಾವುದೇ ಮಾಹಿತಿಯನ್ನು ಸಲ್ಲಿಸಿಲ್ಲ ಹಾಗೂ, ಅವರಿಗೆ ಇಲಾಖಾ ಮುಖ್ಯಸ್ಥರು ನೀಡಲಾದ ಜ್ಞಾಪನಕ್ಕೆ ಉತ್ತರ / ವಿವರಣೆ ಸಲ್ಲಿಸುವ ಕನಿಷ್ಠ ಸೌಜನ್ಯ ಕೂಡ ಹೊಂದಿಲ್ಲದೆ <u>ಬೇರೆ ಇಲಾಖೆಯಲ್ಲಿ ನಿಯೋಜನೆ ಮೇಲಿದ್ದ ಅವರ ಸೇವೆಯ ನಿಯಂತ್ರಣ ಮಾತ್ರ ಇಲಾಖೆಗೆ ಸಂಬಂಧಿಸಿಲ್ಲವೆಂಬಂತೆ,</u> ತಟಸ್ಥ ಧೋರಣೆ ಅನುಸರಿಸಿದ್ದರಿಂದ, ಇವರಿಗೆ ನೀಡಲಾದ ಬಡ್ತಿಯನ್ನು ಪುನರ್ ಪರಿಶೀಲಿಸಿ ರದ್ದುಪಡಿಸುವ ಹಂತದಲ್ಲಿ, "ಉಲ್ಲೇಖ (3) ರಲ್ಲಿನ ಮುಖ್ಯ ಇಂಜಿನೀಯರ್‌ರವರ ಕಚೇರಿ, ಲೋಕೋಪಯೋಗಿ ಇಲಾಖೆ, ಧಾರವಾಡ ಇವರ ಕಚೇರಿ ಆದೇಶದ ದಿನಾಂಕ 28.4.2008 ರಲ್ಲಿ ಸದರಿ ಸಾಂಖ್ಯಿಕ ನಿರೀಕ್ಷಕರಿಗೆ ಬಡ್ತಿ ನೀಡಿ ಬೆಳಗಾವಿ ನಗರಪಾಲಿಕೆಗೆ ನೇಮಕಾತಿ ಮಾಡಲಾದ ಆದೇಶವನ್ನು ಅವರ ಹಂತದಲ್ಲಿಯೇ ಮಾರ್ಪಡಿಸಿ, ಸದರಿ ಅವರನ್ನು ಅದೇ ಕಚೇರಿಯಲ್ಲಿ ಖಾಲಿ ಇದ್ದ ಸಹಾಯಕ ಸಾಂಖ್ಯಿಕ ಅಧಿಕಾರಿಗಳ ಹುದ್ದೆಗೆ ಸ್ಥಳನಿಯುಕ್ತಿಗೊಳಿಸಿರುವ ಕುರಿತು ಕೇವಲ ಮಾಹಿತಿಗಾಗಿ ಈ ಕಚೇರಿ ಆದೇಶದ ಪ್ರತಿಯನ್ನು ಈ ನಿರ್ದೇಶನಾಲಯಕ್ಕೆ ಕಳುಹಿಸಿದ್ದನ್ನು ಪರಿಶೀಲಿಸಿ, "ಇಲಾಖಾ ಮುಖ್ಯಸ್ಥರು ಅಥವಾ ನೇಮಕಾತಿ ಪ್ರಾಧಿಕಾರ ಮಾತ್ರ ಸದರಿ ಅವರಿಗೆ ಬಡ್ತಿ ನೀಡಿ ನೇಮಕಾತಿ ಮಾಡಲಾದ ಆದೇಶವನ್ನು ಮಾರ್ಪಡಿಸಬಹುದಾಗಿದೆಯಾದ್ದರಿಂದ, ಉಲ್ಲೇಖ (3) ರಲ್ಲಿನ ಆದೇಶವನ್ನು ಯಾವ ನಿಯಮಗಳ ಅಡಿಯಲ್ಲಿ ಹೊರಡಿಸಲಾಗಿದೆ ಎಂಬುದರ ಕುರಿತು ಮಾಹಿತಿ ಒದಗಿಸುವಂತೆ ಮುಖ್ಯ ಅಭಿಯಂತರರು, ಲೋಕೋಪಯೋಗಿ ಇಲಾಖೆ, ಧಾರವಾಡ ಇವರನ್ನು ಉಲ್ಲೇಖ (4) ರ ಪತ್ರದ ದಿನಾಂಕ 16.5.2008 ರಲ್ಲಿ ಕೋರಲಾಗಿತ್ತು. ಉಲ್ಲೇಖ (5) ರಲ್ಲಿನ ಅವರ ಪತ್ರದ ದಿನಾಂಕ 16.6.2008 ರಲ್ಲಿ ಈ ನಿರ್ದೇಶನಾಲಯದ ಪತ್ರವನ್ನು ಉಲ್ಲೇಖಿಸದೆ, ಅಥವಾ ಅವರ ಕಚೇರಿಯ ಯಾವ ನಿಯಮಗಳ ಅನ್ವಯ ಸದರಿ ಸಾಂಖ್ಯಿಕ ನಿರೀಕ್ಷಕರಿಗೆ ಇಲಾಖಾ ಮುಖ್ಯಸ್ಥರು ನೀಡಿದ ಆದೇಶವನ್ನು ಮಾರ್ಪಡಿಸಿರುವ ಕುರಿತು ಮಾಹಿತಿ ಒದಗಿಸದೆ, ಸದರಿ ಅವರು ದಿನಾಂಕ 29.4.2008 ರಂದು ಸಹಾಯಕ ಸಾಂಖ್ಯಿಕ ಅಧಿಕಾರಿಗಳ ಹುದ್ದೆಯಲ್ಲಿ ಕರ್ತವ್ಯಕ್ಕೆ ಹಾಜರಾಗಿರುತ್ತಾರೆಂದು ನಮೂದಿಸಿ ದಿನಾಂಕ 28.4.2008 ರಿಂದ ಅವರ ಕಚೇರಿಯಲ್ಲಿ ಸಾಂಖ್ಯಿಕ ನಿರೀಕ್ಷಕರ ಹುದ್ದೆ

ಖಾಲಿ ಇರುವುದಾಗಿ ಮಾಹಿತಿ ನೀಡಿರುತ್ತಾರೆ. ನಂತರ, ಉಲ್ಲೇಖ (6) ರಲ್ಲಿನ ಅರೆ ಸರ್ಕಾರಿ ಪತ್ರದ ದಿನಾಂಕ 9.7.2008 ರಲ್ಲಿ ಸರ್ಕಾರದ ಸಿಬ್ಬಂದಿಯೊಬ್ಬರಿಗೆ ಬಡ್ತಿ ನೀಡಿ ನೇಮಕಾತಿ ಮಾಡಲಾದ ಆದೇಶವನ್ನು "ಇಲಾಖಾ ಮುಖ್ಯಸ್ಥರು ಅಥವಾ ನೇಮಕಾತಿ ಪ್ರಾಧಿಕಾರ" ಮಾತ್ರ ಮಾರ್ಪಡಿಸಬಹುದಾಗಿದೆಯಾದ್ದರಿಂದ ಹಾಗೂ ಅಂತಹ ಸಕ್ಷಮ ಪ್ರಾಧಿಕಾರವನ್ನು ಹೊರತುಪಡಿಸಿ, ಇನ್ನಿತರ ಯಾವುದೇ ಪ್ರಾಧಿಕಾರವು ತಾವಾಗಿಯೇ (suo-moto) ಬಡ್ತಿ ನೀಡಿ ನೇಮಕಾತಿ ಮಾಡಿದ ಆದೇಶವನ್ನು ಮಾರ್ಪಾಡು ಮಾಡಿದಲ್ಲಿ ಅಂತಹ ಬಡ್ತಿ ಮತ್ತು ನೇಮಕಾತಿ ಸಕ್ರಮವಾಗದೆ ಇರಬಹುದಾದ್ದರಿಂದ ಅವರು ದಿನಾಂಕ 28.4.2008 ರಂದು ಹೊರಡಿಸಿದ ಆದೇಶವನ್ನು ಮರುಪರಿಶೀಲಿಸುವಂತೆ ಹಾಗೂ ಈ ವಿಷಯವು ಇತ್ಯರ್ಥವಾಗುವವರೆಗೆ ಸದರಿ ಅವರು ಈ ನಿರ್ದೇಶನಾಲಯದ ಸಾಂಖ್ಯಿಕ ನಿರೀಕ್ಷಕರ ವೃಂದದಲ್ಲಿಯೆ ಮುಂದುವರೆದಿದ್ದಾರೆಂದು ಪರಿಗಣಿಸುವಂತೆ ಕೋರಲಾಗಿತ್ತು. ಉಲ್ಲೇಖ (7) ರಲ್ಲಿನ ಲೋಕೋಪಯೋಗಿ ಇಲಾಖೆ, ಧಾರವಾಡ ಇವರ ಪತ್ರದ ದಿನಾಂಕ 22.7.2008 ರಲ್ಲಿ ಮೇಲೆ ತಿಳಿಸಲಾದ ಅರೆ ಸರ್ಕಾರಿ ಪತ್ರದಲ್ಲಿನ ಅಂಶಗಳಿಗೆ ಸಂಬಂಧಿಸಿದಂತೆ ಖಚಿತವಾದ ಮಾಹಿತಿ ನಮೂದಿಸದೆ ಇನ್ನಿತರ ವಿಷಯಗಳೊಂದಿಗೆ ಶ್ರೀ ಎಸ್.ಆರ್. ನಿರಡಿ, ಅವರ ಕಚೇರಿಯ ಸಹಾಯಕ ಸಾಂಖ್ಯಿಕ ಅಧಿಕಾರಿಗಳ ಬಡ್ತಿ ವಿಷಯವನ್ನು ನಮೂದಿಸಿ, ಶ್ರೀಮತಿ ಎಸ್.ವಿ. ಮನಗೂಳಿ, ಸಾಂಖ್ಯಿಕ ನಿರೀಕ್ಷಕರಿಗೆ ಈ ನಿರ್ದೇಶನಾಲಯದಿಂದ ಬಡ್ತಿ ನೀಡಿ ಬೆಳಗಾವಿ ನಗರಪಾಲಿಕೆಗೆ ನೇಮಕಾತಿ ಮಾಡಿದ ಆದೇಶವನ್ನು ಮಾರ್ಪಡಿಸಿರುವುದಾಗಿ ಮಾಹಿತಿ ನೀಡಿರುತ್ತಾರೆ.

ಮೇಲಿನ ಎಲ್ಲಾ ಅಂಶಗಳನ್ನು ಪರಿಶೀಲಿಸಲಾಗಿ, ಸದರಿ ಸಾಂಖ್ಯಿಕ ನಿರೀಕ್ಷಕರು ಅವರಿಗೆ ಇಲಾಖಾ ಮುಖ್ಯಸ್ಥರು ದಿನಾಂಕ 5.4.2008 ರಂದು ನೀಡಲಾದ ಜ್ಞಾಪನಕ್ಕೆ ವಿವರಣೆ ನೀಡುವ ಬದಲಾಗಿ ಅಥವಾ ಅದೇ ಸ್ಥಳದಲ್ಲಿ / ಅದೇ ಕಚೇರಿಯಲ್ಲಿ ಸಹಾಯಕ ಸಾಂಖ್ಯಿಕ ಅಧಿಕಾರಿಗಳ ಹುದ್ದೆ ಖಾಲಿ ಇದ್ದಲ್ಲಿ ಅವರು ಕರ್ತವ್ಯ ನಿರ್ವಹಿಸುತ್ತಿರುವ ಕಚೇರಿಯ ಮುಖ್ಯಸ್ಥರ ಮುಖಾಂತರ ಸೂಕ್ತವಾದ ಕೋರಿಕೆ ಸಲ್ಲಿಸಿ ಅಂಥಹ ಖಾಲಿ ಹುದ್ದೆಗೆ ನೇಮಕಾತಿ ಮಾಡುವಂತೆ ಕೋರಿಕೆ ಸಲ್ಲಿಸಿದ್ದಲ್ಲಿ ಪರಿಗಣಿಸಬಹುದಾಗಿತ್ತು. ಆದರೆ, ಸದರಿ ಅವರು ಇಂತಹ ಯಾವುದೇ ವಿಧಾನವನ್ನು ಅನುಸರಿಸದೇ ಇದ್ದುದ್ದನ್ನು ಪರಿಗಣಿಸಲಾಗಿ, ಹಾಗೂ ಕರ್ನಾಟಕ ನಾಗರೀಕ ಸೇವಾ (ಸಾಮಾನ್ಯ ನೇಮಕಾತಿ) ನಿಯಮಗಳು, 1977 ರ ನಿಯಮ: 2 ರ ಅನ್ವಯ "ಬಡ್ತಿ" ಎಂದರೆ ಸರ್ಕಾರಿ ನೌಕರನು ಹೊಂದಿದ ಹುದ್ದೆಯಿಂದ ಮುಂದಿನ ಉನ್ನತ ಹುದ್ದೆಗೆ ಬಡ್ತಿ ನೀಡಬಹುದಾಗಿದ್ದರೂ, ಅದೇ ನಿಯಮಗಳ ನಿಯಮ: 2 ರ ಉಪನಿಯಮ: ಎನ್(iii) ರ ಅನ್ವಯ, ಅಂತಹ ಬಡ್ತಿಯನ್ನು ನೇಮಕಾತಿ ಪ್ರಾಧಿಕಾರ ಮಾತ್ರ ನೀಡತಕ್ಕದ್ದಾಗಿದ್ದರಿಂದ, ಅಂತಹ ಬಡ್ತಿ ನೀಡಿದ ಆದೇಶವನ್ನು ನೇಮಕಾತಿ ಪ್ರಾಧಿಕಾರ ಮಾತ್ರ ಸಂದರ್ಭಾನುಸಾರ ಮಾರ್ಪಡಿಸಬಹುದಾದ್ದರಿಂದ ಹಾಗೂ ಸದರಿ ಸಾಂಖ್ಯಿಕ ನಿರೀಕ್ಷಕರಿಗೆ ಸಂಬಂಧಿಸಿದಂತೆ ಮಾತ್ರ ಇಲಾಖೆಯ ಇಲಾಖಾ ಮುಖ್ಯಸ್ಥರು ಅಥವಾ ನೇಮಕಾತಿ ಪ್ರಾಧಿಕಾರವು ಸಾಂಖ್ಯಿಕ ನಿರೀಕ್ಷಕರಿಂದ ಸಹಾಯಕ ಸಾಂಖ್ಯಿಕ ಅಧಿಕಾರಿಗಳಿಗೆ ಬಡ್ತಿ ನೀಡಿ ನೇಮಕಾತಿ ಮಾಡಲಾದ ಆದೇಶವನ್ನು ಅಂತಹ ಸಕ್ರಮ ಪ್ರಾಧಿಕಾರವನ್ನು ಹೊರತುಪಡಿಸಿ ಇನ್ನಿತರ ಪ್ರಾಧಿಕಾರವು ಬಡ್ತಿ ನೀಡಿ ನೇಮಕಾತಿ ಮಾಡಿದ ಅಂತಹ ಆದೇಶವನ್ನು ಮಾರ್ಪಾಡು ಮಾಡಿದ್ದಲ್ಲಿ, ಅಂತಹ ಬಡ್ತಿ ಮತ್ತು ನೇಮಕಾತಿ ಆದೇಶವು ಸಕ್ರಮವಲ್ಲವಾದ್ದರಿಂದ, ಸದರಿ ಸಾಂಖ್ಯಿಕ ನಿರೀಕ್ಷಕರಿಗೆ ನೀಡಲಾದ ಬಡ್ತಿ ಆದೇಶವನ್ನು ರದ್ದುಗೊಳಿಸದೆ ಅನಿರ್ಧಿಷ್ಟವಾದ ಅವಧಿಯವರೆಗೆ ಅದರ ಅಸ್ತಿತ್ವವನ್ನು ಮುಂದುವರೆಸಿದಲ್ಲಿ, ನಿಯಮಗಳಿಗೆ ವ್ಯತಿರಿಕ್ತವಾಗಿದ್ದರಿಂದ ಈ ಕೆಳಕಂಡ ಆದೇಶವನ್ನು ಹೊರಡಿಸಲಾಗಿದೆ.

**ಕಚೇರಿ ಆದೇಶ ಸಂಖ್ಯೆ: ಆಡಳಿತ / 299 / 2008–09**

ಈ ನಿರ್ದೇಶನಾಲಯದ ಉಲ್ಲೇಖ (1) ರಲ್ಲಿನ ದಿನಾಂಕ 22.10.2007 ರ ಆದೇಶದಲ್ಲಿ ವಿಧಿಸಲಾದ ಷರತ್ತುಗಳು, ಉಲ್ಲೇಖ (2) ರಲ್ಲಿನ ಕಾರಣ ಕೇಳುವ ಜ್ಞಾಪನ ಹಾಗೂ ಪ್ರಸ್ತಾವನೆಯಲ್ಲಿನ ಎಲ್ಲಾ ಸನ್ನಿವೇಷಗಳನ್ನು ಪರಿಗಣಿಸಿ, ಉಲ್ಲೇಖ (1) ರಲ್ಲಿನ ಈ ನಿರ್ದೇಶನಾಲಯದ ಆದೇಶದ ದಿನಾಂಕ 17.3.2007 ರಲ್ಲಿ ಶ್ರೀಮತಿ ಎಸ್.ವಿ. ಮನಗೂಳಿ, ಸಾಂಖ್ಯಿಕ ನಿರೀಕ್ಷಕರು (ವೇತನ ಶ್ರೇಣಿ ರೂ. 7275–13350), ಲೋಕೋಪಯೋಗಿ ಇಲಾಖೆ, ಧಾರವಾಡ ಇವರಿಗೆ ಸಹಾಯಕ ಸಾಂಖ್ಯಿಕ ಅಧಿಕಾರಿ ಹುದ್ದೆಗೆ (ವೇತನ ಶ್ರೇಣಿ ರೂ. 10000–18150) ಬಡ್ತಿ ನೀಡಿದ್ದನ್ನು ಹಾಗೂ ಅವರಿಗೆ ದಿನಾಂಕ 22.10.2007 ರ ಈ ನಿರ್ದೇಶನಾಲಯದ ಆದೇಶದಲ್ಲಿ ಸಹಾಯಕ ಸಾಂಖ್ಯಿಕ ಅಧಿಕಾರಿಯಾಗಿ ಬೆಳಗಾವಿ ನಗರಪಾಲಿಕೆಯಲ್ಲಿ ಖಾಲಿ ಇರುವ ಹುದ್ದೆಗೆ ನೇಮಕಾತಿ ಮಾಡಿದ್ದನ್ನು ತಕ್ಷಣದಿಂದ ರದ್ದುಪಡಿಸಲಾಗಿದೆ. ಹಾಗೂ ತತ್ಪರಿಣಾಮವಾಗಿ ಬಡ್ತಿ ನೀಡಿ ನೇಮಕಾತಿ ಮಾಡಲಾದ ಸ್ಥಳದಲ್ಲಿ ಸದರಿ ಅವರು ಕರ್ತವ್ಯಕ್ಕೆ ವರದಿ ಮಾಡಿಕೊಳ್ಳದೇ ಇರುವುದರಿಂದ ಬಡ್ತಿಯನ್ನು ರದ್ದುಪಡಿಸಲಾದ ಈ ಆದೇಶವು ಉಲ್ಲೇಖ (1) ರಲ್ಲಿನ ಆದೇಶಗಳಲ್ಲಿ ಮತ್ತು ಉಲ್ಲೇಖ (2) ರಲ್ಲಿನ ಜ್ಞಾಪನದಲ್ಲಿ ನಮೂದಿಸಲಾದ ಷರತ್ತುಗಳ ನಿರ್ಬಂಧನೆಗೊಳಪಟ್ಟಿರುತ್ತವೆ. ಹಾಗೂ, ಸದರಿ ಅವರ ಸರ್ಕಾರದ ಸೇವೆಯು "ಸಾಂಖ್ಯಿಕ ನಿರೀಕ್ಷಕರ" ವೃಂದದ ಸೇವೆ ಎಂದೇ ಮುಂದಿನ ಆದೇಶದವರೆಗೆ ಪರಿಗಣಿಸತಕ್ಕದ್ದು.

**ಹೆಚ್.ಇ. ರಾಜಶೇಖರಪ್ಪ**

ಪಿ.ಆರ್.1063 ಆರ್ಥಿಕ ಮತ್ತು ಸಾಂಖ್ಯಿಕ ನಿರ್ದೇಶನಾಲಯ.

**ನಿರ್ದೇಶಕರು, ಗಣಿ ಮತ್ತು ಭೂವಿಜ್ಞಾನ ಇಲಾಖೆ, ಬೆಂಗಳೂರು ರವರ ನಡುವಳಿಗಳು**

**ವಿಷಯ:** ಬೆಂಗಳೂರು ಗ್ರಾಮಾಂತರ ಜಿಲ್ಲೆ, ಕನಕಪುರ ತಾಲ್ಲೂಕು, ಕುನೂರ ಗ್ರಾಮದಲ್ಲಿ ಮಲ್ಟಿಕಲರ್ ಗ್ರಾನೈಟ್‌ಗಾಗಿ ಮೆ: ಜೆಮಿನಿ ಎಕ್ಸ್‌ಪೋರ್ಟ್ಸ್‌ರವರಿಗೆ ಮಂಜೂರಾಗಿದ್ದ ಕಲ್ಲು ಗಣಿ ಗುತ್ತಿಗೆ ಸಂಖ್ಯೆ:204ರ ಗುತ್ತಿಗೆಯನ್ನು ಗುತ್ತಿಗೆಯ ಮೇಲಿನ ಬಾಕಿ ರೂ.6,82,212/– ಪಾವತಿಸದೆ ಇದ್ದ ಕಾರಣ ರದ್ದುಗೊಳಿಸುತ್ತಿರುವ ಬಗ್ಗೆ.

**ಉಲ್ಲೇಖ:** 1) ಕ.ಉ.ಖ.ರಿ.ನಿ.94ರ ನಿಯಮ 6(1) ಮತ್ತು ನಿಯಮ 39ರಡಿ ಈ ಕಛೇರಿಯಿಂದ ಜಾರಿಯಾದ ನೋಟಿಸ್ ಸಂಖ್ಯೆ: ಗಭೂಇ:ಡಿಸಿಬಿ: ಕಗಗು:204:2008–09:3260–62 ದಿನಾಂಕ:09.08.2005.

2) ಉಪ ನಿರ್ದೇಶಕರು, ರಾಮನಗರ ರವರ ಪತ್ರಸಂಖ್ಯೆ:12152: ಗಭೂಇ:ಡಿಸಿಬಿ: ಕಗಗು:204:2007–08, ದಿನಾಂಕ:09.12.2007.

**ಪ್ರಸ್ತಾವನೆ:**

ಬೆಂಗಳೂರು ಗ್ರಾಮಾಂತರ ಜಿಲ್ಲೆ, ಕನಕಪುರ ತಾಲ್ಲೂಕು, ಕುನೂರ ಗ್ರಾಮದ ಸರ್ವೆ ನಂ.289, 287 ರಲ್ಲಿ ಮೆ: ಜೆಮಿನಿ ಎಕ್ಸ್‌ಪೋರ್ಟ್ಸ್ ರವರಿಗೆ 9.20 ಎಕರೆಗೆ ದಿನಾಂಕ:18.08.1998ರಿಂದ 10 ವರ್ಷಗಳಿಗಾಗಿ ಕಲ್ಲು ಗಣಿ ಗುತ್ತಿಗೆ ಮಂಜೂರು ಮಾಡಲಾಗಿತ್ತು. ಈ ಕಛೇರಿಯ ಅಂತಿಮ ನೋಟೀಸು ಸಂಖ್ಯೆ: ಡಿಸಿಬಿ: ಕಗಗು:204:3260–62 ದಿನಾಂಕ:09.08.2005ರಲ್ಲಿ ಗುತ್ತಿಗೆದಾರರಿಗೆ ನಿಯಮಾನುಸಾರ ಸೂಚನಾ ಪತ್ರ ನೀಡಿತ್ತು. 2007 ಮಾರ್ಚ್ ಅಂತ್ಯದವರೆಗೆ ಬಾಕಿ ರೂ.6,82,212/–ಗಳನ್ನು 60 ದಿನಗಳೊಳಗೆ ಸಂದಾಯಿಸುವಂತೆ ಹಾಗೂ ಗಣಿಗಾರಿಕೆ ಕೈಗೊಳ್ಳದೆ ಒಂದು ವರ್ಷಕ್ಕಿಂತ ಹೆಚ್ಚಿನ ಅವಧಿಗೆ ನಿಷ್ಕ್ರಿಯವಾಗಿ ಇಟ್ಟ ಬಗ್ಗೆ ಸಮಜಾಯಿಸಿ ಕೇಳಿ ಕರ್ನಾಟಕ ಉಪ ಖನಿಜ ರಿಯಾಯಿತಿ ನಿಯಮ 1994ರ ನಿಯಮ 6(1) ಹಾಗೂ ನಿಯಮ 39ರಡಿ ನೋಟೀಸು ಜಾರಿಗೊಳಿಸಲಾಗಿತ್ತು. ಆದರೆ ಸದರಿ ಗುತ್ತಿಗೆದಾರರಿಂದ ಇದುವರೆವಿಗೂ ಬಾಕಿ ಪಾವತಿಯಾಗಿರುವುದಿಲ್ಲ. ಹಾಗೂ ಗುತ್ತಿಗೆ ನಿಷ್ಕ್ರೀಯವಾಗಿರುವುದರಿಂದ ಈ ಬಗ್ಗೆ ಸಮಜಾಯಿಸಿ ಬಂದಿರುವುದಿಲ್ಲ.

ಗಣಿ ಮತ್ತು ಭೂವಿಜ್ಞಾನ ಇಲಾಖೆಯ ನಿರ್ದೇಶಕರ ಗಮನಕ್ಕೆ ಬಂದಂತೆ ಗುತ್ತಿಗೆದಾರರು ಮೇಲಿನ ಉಲ್ಲೇಖಿತ ನೋಟೀಸುಗಳಿಗೆ ಗುತ್ತಿಗೆದಾರರು ಯಾವ ರೀತಿಯು ಸ್ಪಂಧಿಸಿರುವುದಿಲ್ಲವಾದ ಕಾರಣ ಕರ್ನಾಟಕ ಉಪ ಖನಿಜ ರಿಯಾಯಿತಿ ನಿಯಮ 1994ರ ನಿಯಮ 6(1) ಮತ್ತು ನಿಯಮ 39ರಡಿ ಸರ್ಕಾರದ ಅಧಿಸೂಚನೆ–III ಸಂಖ್ಯೆ: ಸಿಐ 418 ಎಂ.ಆರ್.ಸಿ. 92 ದಿನಾಂಕ:02.07.1994 ಪ್ರತ್ಯೋಜಿಸಿರುವ ಅಧಿಕಾರದಂತೆ ಕಲ್ಲುಗಣಿ ಗುತ್ತಿಗೆ ಸಂಖ್ಯೆ: 204ರಡಿ ಕ್ರಮ ಜರುಗಿಸುವುದು ಅವಶ್ಯಕವಾದ್ದರಿಂದ ಈ ಕೆಳಗಿನಂತೆ ಆದೇಶ.

**ಆದೇಶ ಸಂಖ್ಯೆ: ಗಭೂಇ:ಕಗಗು 204:2008–09, ದಿನಾಂಕ:5ನೇ ಜೂನ್, 2008**

ಕರ್ನಾಟಕ ಉಪ ಖನಿಜ ರಿಯಾಯಿತಿ ನಿಯಮ 1994ರ ನಿಯಮ 6(1) ಮತ್ತು ನಿಯಮ 39ರಂತೆ ಗಣಿ ಮತ್ತು ಭೂ ವಿಜ್ಞಾನ ಇಲಾಖೆಯ ನಿರ್ದೇಶಕರಿಗೆ ಪ್ರತ್ಯೋಜಿಸಿರುವ ಅಧಿಕಾರದಡಿಯಲ್ಲಿ ಬೆಂಗಳೂರು ಗ್ರಾಮಾಂತರ ಜಿಲ್ಲೆ, ಕನಕಪುರ ತಾಲ್ಲೂಕು, ಕುನೂರ ಗ್ರಾಮದ ಸರ್ವೆ ನಂ.287, 289 ರಲ್ಲಿ 9–20 ಎಕರೆಗೆ ಮಲ್ಟಿಕಲರ್ ಗ್ರಾನೈಟ್‌ಗಾಗಿ ನೀಡಿದ್ದ ಕಲ್ಲು ಗಣಿ ಗುತ್ತಿಗೆ ಸಂಖ್ಯೆ:204ನ್ನು ತಕ್ಷಣದಿಂದ ಜಾರಿಗೆ ಬರುವಂತೆ ಗುತ್ತಿಗೆಯನ್ನು ರದ್ದುಪಡಿಸಲಾಗಿದೆ ಹಾಗೂ ಈ ಗುತ್ತಿಗೆಗೆ ಸಲ್ಲಿಸಿದ್ದ ಭದ್ರತಾ ಠೇವಣಿಯನ್ನು ಇಲಾಖೆಗೆ ಮುಟ್ಟುಗೋಲು ಹಾಕಿಕೊಳ್ಳಲಾಗಿದೆ.

ನಿರ್ದೇಶಕರು,
ಗಣಿ ಮತ್ತು ಭೂವಿಜ್ಞಾನ ಇಲಾಖೆ, ಬೆಂಗಳೂರು.

ಪಿ.ಆರ್.687

**ಅರಣ್ಯ ಇಲಾಖೆ**

**ಪ್ರಾಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಶಿವಮೊಗ್ಗ ವಿಭಾಗ, ಶಿವಮೊಗ್ಗ ಇವರ ನ್ಯಾಯಾಲಯದಲ್ಲಿ**

**ಪ್ರಕಟಣೆ**

**ಸಂಖ್ಯೆ: ಎ3–71ಎ–ವಾಮು–ಸಿಆರ್–15/08–09, ದಿನಾಂಕ:15ನೇ ಏಪ್ರಿಲ್, 2008**

**ವಿಷಯ:** ಶ್ರೀಗಂಧದ ಕಳ್ಳ ಸಾಗಾಣಿಕೆಯಲ್ಲಿ ತೊಡಗಿದ್ದ ವಾಹನಗಳನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವ ಬಗ್ಗೆ.

ಶಿವಮೊಗ್ಗ ಅರಣ್ಯ ವಿಭಾಗದ ವಿವಿಧ ವಲಯ ಅರಣ್ಯಾಧಿಕಾರಿಗಳು ಹಾಗೂ ಪೊಲೀಸ್ ಇಲಾಖೆಯವರು ಶ್ರೀಗಂಧದ ಕಳ್ಳ ಸಾಗಾಣಿಕೆಯಲ್ಲಿ ತೊಡಗಿದ್ದ ಈ ಕೆಳಕಂಡ ವಾಹನಗಳನ್ನು ಸೊತ್ತಿನೊಂದಿಗೆ ವಶಪಡಿಸಿಕೊಂಡು, ಅರಣ್ಯ ಮೊಕದ್ದಮೆ ದಾಖಲಿಸಿ, ಕರ್ನಾಟಕ ಅರಣ್ಯ ಕಾಯ್ದೆ 1963ರ ಕಲಂ 71ಎ ನಿಯಮದ ಪ್ರಕಾರ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಮೇಲ್ಕಂಡ ಪ್ರಾಧಿಕೃತ ಅಧಿಕಾರಿಗಳಿಗೆ ಮನವಿ ಸಲ್ಲಿಸಿರುತ್ತಾರೆ. ವಾಹನಗಳ ವಿವರ ಈ ಕೆಳಕಂಡಂತೆ ಇರುತ್ತದೆ.

| ಕ್ರ. ಸಂ. | ಅರಣ್ಯ ಮೊಕದ್ದಮೆ/ ಪೊಲೀಸ್ ಕ್ರೈಂ ಸಂಖ್ಯೆ | ವಾಹನಗಳ ಮಾದರಿ ಮತ್ತು ನೋಂದಣಿ ಸಂಖ್ಯೆ | ಇಂಜಿನ್ ಸಂಖ್ಯೆ | ಚಾಸಿಸ್ ಸಂಖ್ಯೆ |
|---|---|---|---|---|
| ತೀರ್ಥಹಳ್ಳಿ ವಲಯ | | | | |
| 1. | 1/04–05 | ಟಿವಿಎಸ್ ಮೋಟಾರ್ ಬೈಕ್ ನಂ.ಕೆಎ–14–ಇ–6391 | 1710-M-950678 | ಕಾಣುತ್ತಿಲ್ಲ |

| ಕ್ರ. ಸಂ. | ಅರಣ್ಯ ಮೊಕದ್ದಮೆ/ ಪೊಲೀಸ್ ಕ್ರೈಂ ಸಂಖ್ಯೆ | ವಾಹನಗಳ ಮಾದರಿ ಮತ್ತು ನೋಂದಣಿ ಸಂಖ್ಯೆ | ಇಂಜಿನ್ ಸಂಖ್ಯೆ | ಚಾಸಿಸ್ ಸಂಖ್ಯೆ |
|---|---|---|---|---|
| 2. | 22/04–05 | ಬಜಾಜ್ ಚೇತಕ್ ಸ್ಕೂಟರ್ ನಂ.ಸಿಎನ್‌ಓ–5157 | E-06-E-477385 | ಕಾಣುತ್ತಿಲ್ಲ |
| 3. | 26/04–05 | ಹೀರೋಹೊಂಡಾ ಮೋಟಾರ್ ಬೈಕ್ ನಂ.ಕೆಎ–14–ಇ–6589 | G-10-E-604431 | 010-F-559645 |
| 4. | 40/04–05 | ಟಾಟಾ ಸಿಯಾರಾ ಕಾರ್ ನಂ.ಕರ್ನಾಟಕ–19–ಎನ್–9277 | MU-0807679 | 377003-MUO-929107 |
| 5. | 70/04–05 | ಫಿಯೆಟ್ ಕಾರ್ ನಂ. ಕೆಎ–34–ಎಂ–6633 | 7064501 | PAU-003366 |
| 6. | 83/03–04 | ಎಲ್‌ಎಂಎಲ್ ಸ್ಕೂಟರ್ ನಂ. ಕೆಎ–14–ಹೆಚ್–8167 | ಕಾಣುತ್ತಿಲ್ಲ | ಕಾಣುತ್ತಿಲ್ಲ |
| **ಮಂಡಗದ್ದೆ ವಲಯ** | | | | |
| 7. | 39/03–04 | ಒಂದು ಜೋಡೆತ್ತಿನ ಗಾಡಿ | – | – |
| 8. | 47/04–05 | ಹೀರೋಹೊಂಡಾ ಮೋಟಾರ್ ಬೈಕ್ ನಂ. ಕೆಎ–18–ಇ–8488 | 152198 | 95-M-9-F-05918 |
| **ರಿಪ್ಪನ್‌ಪೇಟೆ ವಲಯ** | | | | |
| 9. | 10/04–05 | ಬಜಾಜ್ ಎಂ–80 ಸ್ಕೂಟರ್ ನಂ.ಕೆಎ–14–ಜೆ–9637 | 16-EBDG-1573 | 16 CBD-615237 |
| 10. | 8/04–05 | ಬಜಾಜ್ ಎಂ–80 ಸ್ಕೂಟರ್ ನಂ.ಕೆಎ–15–ಜೆ–1665 | 16-EBGA-69436 | 16CBGA-61800 |
| **ಶಂಕರ ವಲಯ** | | | | |
| 11. | 5/05–06 | ಅಂಬಾಸಿಡರ್ ಕಾರ್ ನಂ. ಕೆಎ–22–ಎಂ–2477 | 624670X | 111-575342 |
| **ಆಯನೂರು ವಲಯ** | | | | |
| 12. | 24/04–05 | ಯಮಹಾ ಮೋಟಾರ್ ಬೈಕ್ ನಂ. ಕೆಎ–19–ಇ–2999 | LL-1-220229 | LL-1-220229 |
| 13. | 31/04–05 | ಹೀರೋಹೊಂಡಾ ಮೋಟಾರ್ ಬೈಕ್ ಕೆಎ–15–ಇ–1628 | G-10-E-592865 | ಕಾಣುತ್ತಿಲ್ಲ |
| 14. | 69/04–05 | ಹೀರೋಹೋಂಡಾ ಮೋಟಾರ್ ಬೈಕ್ ನಂ. ಕೆಎ–14–ಹೆಚ್–2277 | 94-B-17-E-01191 | 94-C-17-F-00047 |
| 15. | 4/05–06 | ಮಾರುತಿ 800 ಕಾರು ನಂ. ಸಿಎಚ–2230 | F-8-BIN-112221 | S.S.80-FIN-145226 |
| **ದೊಡ್ಡಪೇಟೆ ಪೊಲೀಸ್, ಶಿವಮೊಗ್ಗ** | | | | |
| 16. | 188/04–05 | ಫಿಯಟ್ ಕಾರ್ ನಂ.ಸಿಟಿಎ–7619 | PAXF-19393 | PA-425257 |

ಮೇಲ್ಕಂಡ ವಾಹನಗಳ ಮತ್ತು ಸೊತ್ತಿನ ನಿಜವಾದ ಮಾಲೀಕರು, ವಾರಸುದಾರರು ಯಾರಾದರೂ ಇದ್ದಲ್ಲಿ, ಅಂತಹ ವ್ಯಕ್ತಿಗಳು ವಾಹನದ ಮತ್ತು ಸೊತ್ತಿನ ಮಾಲೀಕತ್ವದ ದಾಖಲೆಗಳೊಂದಿಗೆ ಈ ಪ್ರಕಟಣೆ ಪ್ರಕಟಗೊಂಡ ಹದಿನೈದು (15) ದಿನಗಳೊಳಗಾಗಿ ಕೆಳಕಂಡ ಪ್ರಾಧಿಕಾರದ ಮುಂದೆ ಹಾಜರಾಗಿ ತಮ್ಮ ಹಕ್ಕು ಬಾಧ್ಯತೆಯನ್ನು ರುಜುವಾತುಪಡಿಸಬೇಕು ಹಾಗೂ ಈ ವಾಹನಗಳ ಮಾಲೀಕರು, ಅಥವಾ ಅವರ ಪ್ರತಿನಿಧಿಗಳು ಅವರ ವಾಹನವು ಅರಣ್ಯ ಅಪರಾಧದಲ್ಲಿ ಭಾಗಿಯಾಗಿಲ್ಲವೆಂದು ಕರ್ನಾಟಕ ಅರಣ್ಯ ಕಾಯ್ದೆಯ ಪ್ರಕಾರ ರುಜುವಾತುಪಡಿಸಬೇಕು. ನಿಗದಿತ ಅವಧಿಯೊಳಗೆ ಅಹವಾಲು ಇಲ್ಲವಾದಲ್ಲಿ 1963ನೇ ಕರ್ನಾಟಕ ಅರಣ್ಯ ಕಾಯ್ದೆಯ 71ಎ ಮತ್ತು ತಿದ್ದುಪಡಿಯಾದ ಕಲಂನಡಿಯಲ್ಲಿ ಮೇಲ್ಕಂಡ ವಾಹನಗಳನ್ನು ಮತ್ತು ಸೊತ್ತನ್ನು ಈ ಪ್ರಕಟಣೆಯೇ ಅಂತಿಮ ನೋಟೀಸು ಎಂದು ಪರಿಗಣಿಸಿ, ಮುಟ್ಟುಗೋಲು ಹಾಕಿಕೊಳ್ಳುವುದು.

**ಬ್ರಿಜೇಶ್ ಕುಮಾರ್, ಭಾ.ಅ.ಸೇ.**

ಪಿ.ಆರ್.615

ಪ್ರಾಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಶಿವಮೊಗ್ಗ ವಿಭಾಗ, ಶಿವಮೊಗ್ಗ.

## ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ
## ಅಧಿಸೂಚನೆ

**ಸಂಖ್ಯೆ: ಆಕುಕ 77 ಎಂಎಸ್‌ಎಸ್ 2008, ಬೆಂಗಳೂರು, ದಿನಾಂಕ:8ನೇ ಜುಲೈ, 2008**

ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆಯಲ್ಲಿ ಸಹನಿರ್ದೇಶಕರ ವೃಂದದ ಅಧಿಕಾರಿಗಳ ತಾತ್ಕಾಲಿಕ ಜೇಷ್ಠತಾ ಪಟ್ಟಿಯನ್ನು ದಿನಾಂಕ:01.02.2008ರಲ್ಲಿದ್ದಂತೆ ತಯಾರಿಸಲು ಸರ್ಕಾರ ತೀರ್ಮಾನಿಸಿದೆ. ಕರ್ನಾಟಕ ಸರ್ಕಾರಿ ನೌಕರರ (ಜೇಷ್ಠತಾ ನಿಯಮಾವಳಿ) 1957ರ ನಿಯಮ 10ನ್ನು ಅನುಸರಿಸಿ ಸಂಬಂಧಿಸಿದ ಅಧಿಕಾರಿಗಳ ತಾತ್ಕಾಲಿಕ ಜೇಷ್ಠತಾ ಪಟ್ಟಿಯನ್ನು ಸರ್ಕಾರದ ಅಧಿಸೂಚನೆ ಸಂಖ್ಯೆ: ಆಕುಕ 77 ಎಂಎಸ್‌ಎಸ್ 2008, ದಿನಾಂಕ:29.02.2008 ರಂದು ಪ್ರಕಟಿಸಲಾಗಿತ್ತು.

ಈ ತಾತ್ಕಾಲಿಕ ಜೇಷ್ಠತಾ ಪಟ್ಟಿಯ ಮೇಲೆ ಬಾಧಿತರಾದ ವೈದ್ಯಾಧಿಕಾರಿಗಳಿಂದ ಆಕ್ಷೇಪಣೆಗಳನ್ನು ಆಹ್ವಾನಿಸಲಾಗಿತ್ತು. ಸದರಿ ತಾತ್ಕಾಲಿಕ ಜೇಷ್ಠತಾ ಪಟ್ಟಿಗೆ ಸಂಬಂಧಿಸಿದಂತೆ ಸ್ವೀಕೃತವಾಗಿರುವ ಆಕ್ಷೇಪಣೆ/ ಸಲಹೆಗಳನ್ನು ಸರ್ಕಾರವು ಪರಿಶೀಲಿಸಿ, ಜೇಷ್ಠತಾ ಪಟ್ಟಿಯಲ್ಲಿ ಅಳವಡಿಸಿಕೊಂಡಿದೆ. ಸಕಾರಣವಲ್ಲದ ಆಕ್ಷೇಪಣೆ/ ಸಲಹೆಗಳನ್ನು ಸರ್ಕಾರವು ತಳ್ಳಿಹಾಕಿದೆ ಹಾಗೂ ಅನುಬಂಧ–1 ರಲ್ಲಿ ವಿವರಗಳನ್ನು ನೀಡಲಾಗಿದೆ. ಅದರಂತೆ, ದಿನಾಂಕ:01.02.2008ರಲ್ಲಿದ್ದಂತೆ, ಸಹನಿರ್ದೇಶಕರ ವೃಂದದ ಅಂತಿಮ ಜೇಷ್ಠತಾ ಪಟ್ಟಿಯನ್ನು ಇದಕ್ಕೆ ಲಗತ್ತಿಸಿರುವ ಅನುಬಂಧ–2 ರಲ್ಲಿರುವಂತೆ ಪ್ರಕಟಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಪದ್ಮಾವತಿ**

ಸರ್ಕಾರದ ಅಧೀನ ಕಾರ್ಯದರ್ಶಿ,
ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ.

## ANNEXURE-II

**ಸಂಖ್ಯೆ: ಆಕುಕ 77 ಎಂಎಸ್‌ಎಸ್ 2008, ದಿನಾಂಕ:08.07.2008**

**ದಿನಾಂಕ:01.02.2008ರಲ್ಲಿದ್ದಂತೆ ಸಹನಿರ್ದೇಶಕರುಗಳ ವೃಂದದ ಅಂತಿಮ ಜೇಷ್ಠತಾ ಪಟ್ಟಿ**

| ಜೇಷ್ಠತಾ ಸಂಖ್ಯೆ | ಅಧಿಕಾರಿಗಳ ಹೆಸರು | ನೇರ ನೇಮಕಾತಿ ಮುಂಬಡ್ತಿ ಇತರೆ | ಮೀಸಲಾತಿ ವರ್ಗ | ಜನ್ಮ ದಿನಾಂಕ | ಸೇವೆಗೆ ಸೇರಿದ ದಿನಾಂಕ | ನೈಜವಾಗಿ ಮುಂಬಡ್ತಿ ಪಡೆದ ದಿನಾಂಕ | ನೇಮಕಾತಿ ಜೇಷ್ಠತೆಗೆ ನೈಜವಾದ ಅರ್ಹತೆ ದಿನಾಂಕ |
|---|---|---|---|---|---|---|---|
| **I.** | **ಸರ್ಕಾರದ ಅಧಿಸೂಚನೆ ಪತ್ರ ಸಂಖ್ಯೆ: ಆಕುಕ 15 ಎಂಎಸ್‌ಟಿ 2005, ದಿನಾಂಕ:22.02.2007** | | | | | | |
| 1. | ಡಾ: ಉಷಾ ಧನಂಜಯ ವಾಸುನ್‌ಕರ್ | ಮುಂಬಡ್ತಿ | ಅನ್ವಯಿಸುವುದಿಲ್ಲ | 15.08.50 | 19.08.74 | 22.02.07 | 22.02.07 |
| 2. | ಡಾ: ಶಿವರಾಂ ಜಿ. | ಮುಂಬಡ್ತಿ | ಅನ್ವಯಿಸುವುದಿಲ್ಲ | 11.05.50 | 21.07.75 | 22.02.07 | 22.02.07 |
| 3. | ಡಾ: ಕೆ. ಚಂದ್ರಶೇಖರ ನಾಯಕ್ | ಮುಂಬಡ್ತಿ | ಅನ್ವಯಿಸುವುದಿಲ್ಲ | 15.01.51 | 15.10.79 | 22.02.07 | 22.02.07 |
| **II.** | **ಸರ್ಕಾರದ ಅಧಿಸೂಚನೆ ಪತ್ರ ಸಂಖ್ಯೆ: ಆಕುಕ 308 ಎಂಎಸ್‌ಎಸ್ 2007, ದಿನಾಂಕ:04.09.2007** | | | | | | |
| 4. | ಡಾ: ಎಸ್. ಪ್ರಕಾಶ್ | ಮುಂಬಡ್ತಿ | ಅನ್ವಯಿಸುವುದಿಲ್ಲ | 10.05.51 | 04.07.75 | 04.09.07 | 04.09.07 |
| 5. | ಡಾ: ಪಿ. ವಾಸುದೇವ ರಾವ್ | ಮುಂಬಡ್ತಿ | ಅನ್ವಯಿಸುವುದಿಲ್ಲ | 07.06.50 | 21.07.75 | 04.09.07 | 04.09.07 |
| 6. | ಡಾ: ವಿ.ಡಿ. ಪಾಲೇಕರ್ | ಮುಂಬಡ್ತಿ | ಅನ್ವಯಿಸುವುದಿಲ್ಲ | 01.10.51 | 28.06.75 | 04.09.07 | 04.09.07 |
| 7. | ಡಾ: ಮೋಹನ್‌ರಾಜ್ | ಮುಂಬಡ್ತಿ | ಅನ್ವಯಿಸುವುದಿಲ್ಲ | 30.12.50 | 26.06.75 | 04.09.07 | 04.09.07 |
| 8. | ಡಾ: ಆರ್.ವಿ. ಹಳಕಟ್ಟಿ | ಮುಂಬಡ್ತಿ | ಅನ್ವಯಿಸುವುದಿಲ್ಲ | 10.07.50 | 03.12.75 | 04.09.07 | 04.09.07 |
| 9. | ಡಾ: ಕೆ.ಎಂ. ಪ್ರೇಮ | ಮುಂಬಡ್ತಿ | ಅನ್ವಯಿಸುವುದಿಲ್ಲ | 26.12.50 | 01.03.78 | 04.09.07 | 04.09.07 |
| 10. | ಡಾ: ಸಿ.ಆರ್. ಅನ್ನ ಪೂರ್ಣಮ್ಮ | ಮುಂಬಡ್ತಿ | ಅನ್ವಯಿಸುವುದಿಲ್ಲ | 24.08.51 | 08.02.78 | 04.09.07 | 04.09.07 |

**ಪದ್ಮಾವತಿ**

ಸರ್ಕಾರದ ಅಧೀನ ಕಾರ್ಯದರ್ಶಿ,
ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ.

**ANNEXURE-I**

**ಕಡತ ಸಂಖ್ಯೆ: ಆಕುಕ 77 ಎಂಎಸ್ಎಸ್ 2008, ದಿನಾಂಕ:8ನೇ ಜುಲೈ, 2008**

**ದಿನಾಂಕ:01.02.2008 ರಲ್ಲಿದ್ದಂತೆ ಸಹ ನಿರ್ದೇಶಕರ ವೃಂದದ ಅಧಿಕಾರಿಗಳ ಜೇಷ್ಠತಾ ಪಟ್ಟಿ ಪ್ರಕಟಿಸುವಿಕೆಗೆ ಸಂಬಂಧಿಸಿದಂತೆ ತಳ್ಳಿ ಹಾಕಿರುವ ಆಕ್ಷೇಪಣೆಗಳು**

ಡಾ: ಚಂದ್ರಶೇಖರ ನಾಯಕ್, ಸಹ ನಿರ್ದೇಶಕರು (ಲ್ಯಾಬ್ಸ್) Public Health Institute, ಆರೋಗ ಮತ್ತು ಕುಟುಂಬ ಕಲ್ಯಾಣ ಸೇವೆಗಳು, ಬೆಂಗಳೂರು ಇವರು ಸಹನಿರ್ದೇಶಕರ ವೃಂದದ ಜೇಷ್ಠತಾ ಪಟ್ಟಿಗೆ ಸಂಬಂಧಿಸಿದಂತೆ ಪೂರ್ವಾನ್ವಯವಾಗಿ ಮುಂಬಡ್ತಿ ನೀಡಿ ಜೇಷ್ಠತೆಯನ್ನು ನಿಗದಿಪಡಿಸುವಂತೆ ಸಲ್ಲಿಸಲಾಗಿದ್ದ ಆಕ್ಷೇಪಣೆಯನ್ನು ಸರ್ಕಾರವು ಪರಿಶೀಲಿಸಿದೆ. ಸಹ ನಿರ್ದೇಶಕರ ವೃಂದದ ಹುದ್ದೆಗೆ ಮುಂಬಡ್ತಿ ನೀಡಿದ ದಿನಾಂಕಕ್ಕೆ (ದಿನಾಂಕ:22.02.2007) ಅನುಗುಣವಾಗಿ ಜೇಷ್ಠತೆಯನ್ನು ನಿಗದಿಪಡಿಸಿರುವುದರಿಂದ ಇವರ ಆಕ್ಷೇಪಣೆಗಳನ್ನು ತಳ್ಳಿಹಾಕಿದೆ.

**ಪದ್ಮಾವತಿ**

ಪಿ.ಆರ್.936 ಸರ್ಕಾರದ ಅಧೀನ ಕಾರ್ಯದರ್ಶಿ,

ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ.

**ಗಣಿ ಮತ್ತು ಭೂ ವಿಜ್ಞಾನ ಇಲಾಖೆ, ಬೆಂಗಳೂರು, ನಿರ್ದೇಶಕರ ನಡವಳಿ**

**ವಿಷಯ:** ಹಾಸನ ಜಿಲ್ಲೆ, ಅರಕಲಗೂಡು ತಾಲ್ಲೂಕು, ಶ್ರೀಗೋಡು ಗ್ರಾಮದ ಸರ್ವೆ ನಂ.127ರಲ್ಲಿ 2–00 ಎಕರೆಗೆ ಕಪ್ಪು ಶಿಲೆಗಾಗಿ ಶ್ರೀನವಬಾಸಾಬ್ ರವರಿಗೆ ಮಂಜೂರಾಗಿದ್ದ ಕಲ್ಲು ಗಣಿ ಗುತ್ತಿಗೆ ಸಂಖ್ಯೆ: 482ರ ಗುತ್ತಿಗೆಯನ್ನು ಪುನರ್ ಸ್ಥಾಪಿಸುವ ಬಗ್ಗೆ.

**ಉಲ್ಲೇಖ:** ಸರ್ಕಾರದ ಪತ್ರಸಂಖ್ಯೆ: ಸಿಐ:10 ಎಂಎಂಎನ್ 2008: ಬೆಂಗಳೂರು ದಿನಾಂಕ:23.02.2008.

**ಪ್ರಸ್ತಾವನೆ:**

ಹಾಸನ ಜಿಲ್ಲೆ, ಅರಕಲಗೂಡು ತಾಲ್ಲೂಕು, ಶ್ರೀಗೋಡು ಗ್ರಾಮದ ಸರ್ವೆ ನಂ.127ರಲ್ಲಿ 2–00 ಎಕರೆ ವಿಸ್ತೀರ್ಣದಲ್ಲಿ ಕಪ್ಪು ಶಿಲೆಗಾಗಿ ಕಲ್ಲು ಗಣಿ ಗುತ್ತಿಗೆ ಸಂಖ್ಯೆ: 482ರ ಗುತ್ತಿಗೆಯನ್ನು ಶ್ರೀ ನವಾಬಸಾಬ್ ರವರ ಹೆಸರಿನಲ್ಲಿ ದಿನಾಂಕ:06.12.2001 ರಿಂದ 10 ವರ್ಷಗಳಿಗಾಗಿ ಗುತ್ತಿಗೆ ಮಂಜೂರು ಮಾಡಲಾಗಿತ್ತು. ಗುತ್ತಿಗೆದಾರರು ಗುತ್ತಿಗೆ ಮೇಲಿನ ಬಾಕಿಯನ್ನು ಪಾವತಿಸದೆ ಗುತ್ತಿಗೆಯನ್ನು ನಿಷ್ಕ್ರಿಯಗೊಳಿಸಿದ ಕಾರಣ ದಿನಾಂಕ:09.01.2008ರಿಂದ ಜಾರಿಗೆ ಬರುವಂತೆ ನಿರ್ದೇಶಕರಿಗೆ ಪ್ರತ್ಯೋಜಿಸಿಸುವ ಅಧಿಕಾರದ ಅಡಿಯಲ್ಲಿ ಗುತ್ತಿಗೆಯನ್ನು ರದ್ದುಗೊಳಿಸಲಾಗಿತ್ತು.

ಅದರಂತೆ ಗುತ್ತಿಗೆದಾರರು ಪರಿಷ್ಕರಣ ಅರ್ಜಿಯನ್ನು ನಿಯಮ 53(2)ರ ಕರ್ನಾಟಕ ಉಪ ಖನಿಜ ರಿಯಾಯಿತಿ ನಿಯಮ 1994ರಂತೆ ಸರ್ಕಾರಕ್ಕೆ ಸಲ್ಲಿಸಿದ್ದು ಅದರಂತೆ ಸರ್ಕಾರವು ಉಲ್ಲೇಖಿತ ಪತ್ರದಲ್ಲಿ ಅರ್ಜಿಯನ್ನು ಪರಿಗಣಿಸಿ ಗುತ್ತಿಗೆಯನ್ನು ಪುನರ್ ಸ್ಥಾಪಿಸಲು ಆದೇಶಿಸಿರುವುದರಿಂದ ಈ ಆದೇಶ ಮಾಡಲಾಗಿದೆ.

**ಆದೇಶ ಸಂಖ್ಯೆ: ಗಭೂಇ:ಕಗಗು:482:2007–08/1923, ದಿನಾಂಕ:26ನೇ ಜೂನ್, 2008**

ಗಣಿ ಮತ್ತು ಭೂ ವಿಜ್ಞಾನ ಇಲಾಖೆಯ ನಿರ್ದೇಶಕರಿಗೆ ಸರ್ಕಾರದ ಪತ್ರದ ದಿನಾಂಕ:23.02.2008 ನಿರ್ದೇಶಿಸಿರುವಂತೆ ಹಾಸನ ಜಿಲ್ಲೆ, ಅರಕಲಗೂಡು ತಾಲ್ಲೂಕು, ಶ್ರೀಗೋಡು ಗ್ರಾಮದ ಸರ್ವೆ ನಂ.127ರಲ್ಲಿ 2–00 ಎಕರೆ ವಿಸ್ತೀರ್ಣದಲ್ಲಿ ಕಪ್ಪು ಅಲಂಕಾರಿಕ ಶಿಲೆಗಾಗಿ ಕಲ್ಲು ಗಣಿ ಗುತ್ತಿಗೆ ಸಂಖ್ಯೆ: 482 ರ ಗುತ್ತಿಗೆಯನ್ನು ಶ್ರೀ ನವಾಬ ಸಾಬ್ ರವರ ಹೆಸರಿನಲ್ಲಿ ಮಂಜೂರಾಗಿದ್ದ ಕಲ್ಲು ಗಣಿ ಗುತ್ತಿಗೆ ಸಂಖ್ಯೆ: 482ರ ಗುತ್ತಿಗೆಯನ್ನು ರದ್ದುಗೊಳಿಸಿದ ದಿನಾಂಕ:23.02.2008ರಿಂದ ಕರ್ನಾಟಕ ಉಪ ಖನಿಜ ರಿಯಾಯಿತಿ ನಿಯಮ 1994ರ ನಿಯಮಗಳ ಷರತ್ತಿಗೆ ಒಳಪಡಿಸಿ ಗುತ್ತಿಗೆಯನ್ನು ಪುನರ್ ಸ್ಥಾಪಿಸಲಾಗಿದೆ.

ಪಿ.ಆರ್.743 ನಿರ್ದೇಶಕರು.

**ಗಣಿ ಮತ್ತು ಭೂ ವಿಜ್ಞಾನ ಇಲಾಖೆ, ಬೆಂಗಳೂರು, ನಿರ್ದೇಶಕರ ನಡವಳಿ**

**ವಿಷಯ:** ಬೆಂಗಳೂರು ಗ್ರಾಮಾಂತರ ಜಿಲ್ಲೆ, ಕನಕಪುರ ತಾಲ್ಲೂಕು, ಶಿವನಹಳ್ಳಿ ಗ್ರಾಮದಲ್ಲಿ ಮಲ್ಟಿಕಲರ್ ಗ್ರಾನೈಟ್‌ಗಾಗಿ ಶ್ರೀಮತಿ ವಿಜಯವಾಣಿ ಶ್ರೀನಿವಾಸ ರವರಿಗೆ ಮಂಜೂರಾಗಿದ್ದ ಕಲ್ಲು ಗಣಿ ಗುತ್ತಿಗೆ ಸಂಖ್ಯೆ: 507ರ ಗುತ್ತಿಗೆಯನ್ನು ಗುತ್ತಿಗೆಯ ಮೇಲಿನ ಬಾಕಿ ರೂ.85,018/–ಗಳನ್ನು ಪಾವತಿಸದೆ ಇದ್ದ ಕಾರಣ ರದ್ದುಗೊಳಿಸುತ್ತಿರುವ ಬಗ್ಗೆ.

**ಉಲ್ಲೇಖ:** 1) ಕ.ಉ.ಖ.ರಿ.ನಿ.94ರ ನಿಯಮ 6(1) ಮತ್ತು ನಿಯಮ 39ರಡಿ ಈ ಕಛೇರಿಯಿಂದ ಜಾರಿಯಾದ ನೋಟಿಸ್ ಸಂಖ್ಯೆ: ಗಭೂಇ: ಡಿಸಿಬಿ: ಕಗಗು:507:2007–08: 3018–19, ದಿನಾಂಕ:06.06.2007.

2) ಉಪ ನಿರ್ದೇಶಕರವರ ಪತ್ರ ಸಂಖ್ಯೆ: ಗಭೂಇ: ಡಿಸಿಬಿ: ಕಗಗು:507:2007–08:2313, ದಿನಾಂಕ:13.12.2007.

**ಪ್ರಸ್ತಾವನೆ:**

ಬೆಂಗಳೂರು ಗ್ರಾಮಾಂತರ ಜಿಲ್ಲೆ, ಕನಕಪುರ ತಾಲ್ಲೂಕು, ಶಿವನಹಳ್ಳಿ ಸರ್ವೆ ನಂ.154ರಲ್ಲಿ ಶ್ರೀಮತಿ ವಿಜಯವಾಣಿ ಶ್ರೀನಿವಾಸರವರಿಗೆ 2–00 ಎಕರೆಗೆ ದಿನಾಂಕ:05.04.2002 ರಿಂದ 10 ವರ್ಷಗಳಿಗಾಗಿ ಕಲ್ಲು ಗಣಿ ಗುತ್ತಿಗೆ ಮಂಜೂರು

ಮಾಡಲಾಗಿತ್ತು. ಈ ಕಛೇರಿಯ ಅಂತಿಮ ನೋಟಿಸು ಸಂಖ್ಯೆ: ಡಿಸಿಬಿ:ಕಗಗು:507 ದಿನಾಂಕ:06.06.2007ರಲ್ಲಿ ಗುತ್ತಿಗೆದಾರರಿಗೆ ನಿಯಮಾನುಸಾರ ಸೂಚನಾ ಪತ್ರ ನೀಡಿತ್ತು. 2007 ಮಾರ್ಚ್ ಅಂತ್ಯದವರೆಗೆ ಬಾಕಿ ರೂ.85,018/-ಗಳನ್ನು 60 ದಿನಗಳೊಳಗೆ ಸಂದಾಯಿಸುವಂತೆ ಹಾಗೂ ಗಣಿಗಾರಿಕೆ ಕೈಗೊಳ್ಳದೆ ಒಂದು ವರ್ಷಕ್ಕಿಂತ ಹೆಚ್ಚಿನ ಅವಧಿಗೆ ನಿಷ್ಕ್ರೀಯವಾಗಿ ಇಟ್ಟ ಬಗ್ಗೆ ಸಮಜಾಯಿಸಿ ಕೇಳಿ ಕರ್ನಾಟಕ ಉಪ ಖನಿಜ ರಿಯಾಯಿತಿ ನಿಯಮ 1994ರ ನಿಯಮ 6(1) ಹಾಗೂ ನಿಯಮ 39ರಡಿ ನೋಟೀಸು ಜಾರಿಗೊಳಿಸಲಾಗಿತ್ತು. ಆದರೆ ಸದರಿ ಗುತ್ತಿಗೆದಾರರಿಂದ ಇದುವರೆವಿಗೂ ಬಾಕಿ ಪಾವತಿಯಾಗಿರುವುದಿಲ್ಲ ಹಾಗೂ ಗುತ್ತಿಗೆ ನಿಷ್ಕ್ರೀಯವಾಗಿರುವುದರಿಂದ ಈ ಬಗ್ಗೆ ಸಮಜಾಯಿಸಿ ಬಂದಿರುವುದಿಲ್ಲ.

ಗಣಿ ಮತ್ತು ಭೂವಿಜ್ಞಾನ ಇಲಾಖೆಯ ನಿರ್ದೇಶಕರ ಗಮನಕ್ಕೆ ಬಂದಂತೆ ಗುತ್ತಿಗೆದಾರರು ಮೇಲಿನ ಉಲ್ಲೇಖಿತ ನೋಟೀಸುಗಳಿಗೆ ಗುತ್ತಿಗೆದಾರರು ಯಾವ ರೀತಿಯು ಸ್ಪಂದಿಸಿರುವುದಿಲ್ಲವಾದ ಕಾರಣ ಕರ್ನಾಟಕ ಉಪ ಖನಿಜ ರಿಯಾಯಿತಿ ನಿಯಮ 1994ರ ನಿಯಮ 6(1) ಮತ್ತು ನಿಯಮ 39 ರಡಿ ಸರ್ಕಾರದ ಅಧಿಸೂಚನೆ-III ಸಂಖ್ಯೆ: ಸಿಐ 418 ಎಂ.ಆರ್.ಸಿ.92 ದಿನಾಂಕ:02.07.1994 ಪ್ರತ್ಯೋಜಿಸಿರುವ ಅಧಿಕಾರದಂತೆ ಕಲ್ಲುಗಣಿ ಗುತ್ತಿಗೆ ಸಂಖ್ಯೆ: 507ರಡಿ ಕ್ರಮ ಜರುಗಿಸುವುದು ಅವಶ್ಯಕವಾದ್ದರಿಂದ ಈ ಕೆಳಗಿನಂತೆ ಆದೇಶ

**ಆದೇಶ ಸಂಖ್ಯೆ: ಗಭೂಇ:ಕಗಗು:507:2007-08/1042, ದಿನಾಂಕ:5ನೇ ಜೂನ್, 2008**

ಕರ್ನಾಟಕ ಉಪ ಖನಿಜ ರಿಯಾಯಿತಿ ನಿಯಮ 1994ರ ನಿಯಮ 6(1) ಮತ್ತು ನಿಯಮ 39ರಂತೆ ಗಣಿ ಮತ್ತು ಭೂ ವಿಜ್ಞಾನ ಇಲಾಖೆಯ ನಿರ್ದೇಶಕರಿಗೆ ಪ್ರತ್ಯೋಜಿಸಿರುವ ಅಧಿಕಾರದಡಿಯಲ್ಲಿ ಬೆಂಗಳೂರು ಗ್ರಾಮಾಂತರ ಜಿಲ್ಲೆ, ಕನಕಪುರ ತಾಲ್ಲೂಕು, ಶಿವನಹಳ್ಳಿ ಗ್ರಾಮದ ಸರ್ವೆ ನಂ.154ರಲ್ಲಿ 2.00 ಎಕರೆಗೆ ಮಲ್ಟಿಕಲರ್ ಗ್ರಾನೈಟ್‌ಗಾಗಿ ನೀಡಿದ್ದ ಕಲ್ಲು ಗಣಿ ಗುತ್ತಿಗೆ ಸಂಖ್ಯೆ: 507ನ್ನು ತಕ್ಷಣದಿಂದ ಜಾರಿಗೆ ಬರುವಂತೆ ಗುತ್ತಿಗೆಯನ್ನು ರದ್ದುಪಡಿಸಲಾಗಿದೆ. ಹಾಗೂ ಈ ಗುತ್ತಿಗೆಗೆ ಸಲ್ಲಿಸಿದ್ದ ಭದ್ರತಾ ಠೇವಣಿಯನ್ನು ಇಲಾಖೆಗೆ ಮುಟ್ಟುಗೋಲು ಹಾಕಿ ಕೊಳ್ಳಲಾಗಿದೆ.

ಪಿ.ಆರ್.688 ನಿರ್ದೇಶಕರು.

**ಜಿಲ್ಲಾಧಿಕಾರಿಗಳ ಕಾರ್ಯಾಲಯ, ಬೆಂಗಳೂರು ಜಿಲ್ಲೆ, ಬೆಂಗಳೂರು**

**ಅಧಿಕೃತ ಜ್ಞಾಪನ ಪತ್ರ**

**ನಂ.ಎಲ್.ಆರ್.ಎಫ್(ಎನ್) ಸಿ.ಆರ್.5/07-08, ಬೆಂಗಳೂರು, ದಿನಾಂಕ:6ನೇ ಜೂನ್, 2008**

**ವಿಷಯ:** ಎ.ವಿ.ಕೆ. ಟ್ರಸ್ಟ್, ನಂ.8/9, 27ನೇ ಕ್ರಾಸ್, ಮಾನೋಟೈಪ್ ಎದುರು, ಬನಶಂಕರಿ 2ನೇ ಹಂತ, ಬೆಂಗಳೂರು-560070 ರವರು ಬೆಂಗಳೂರು ಉತ್ತರ ತಾಲ್ಲೂಕು, ದಾಸನಪುರ ಹೋಬಳಿ, ಕಾಚೋಹಳ್ಳಿ ಗ್ರಾಮದ ಸ.ನಂ.43 ಹೊಸ ನಂ.69 ರಲ್ಲಿ 0-20 ಗುಂಟೆ ಜಮೀನನ್ನು ಶೈಕ್ಷಣಿಕ ಉದ್ದೇಶಕ್ಕಾಗಿ ಕರ್ನಾಟಕ ಭೂ ಸುಧಾರಣೆ ಕಾಯ್ದೆ ಕಲಂ 109ರಡಿ ಖರೀದಿಸಲು ಅನುಮತಿ ಕೋರಿರುವ ಬಗ್ಗೆ.

ಎ.ವಿ.ಕೆ. ಟ್ರಸ್ಟ್, ನಂ.8/9, 27ನೇ ಕ್ರಾಸ್ ಮಾನೋಟೈಪ್ ಎದುರು, ಬನಶಂಕರಿ 2ನೇ ಹಂತ, ಬೆಂಗಳೂರು-560070 ರವರು ಬೆಂಗಳೂರು ಉತ್ತರ ತಾಲ್ಲೂಕು, ದಾಸನಪುರಹೋಬಳಿ, ಕಾಚೋಹಳ್ಳಿ ಗ್ರಾಮದ ಸ.ನಂ.43 ಹೊಸ ನಂ.69ರಲ್ಲಿ 0-20 ಗುಂಟೆ ಜಮೀನನ್ನು ಶೈಕ್ಷಣಿಕ ಉದ್ದೇಶಕ್ಕಾಗಿ ಕರ್ನಾಟಕ ಭೂ ಸುಧಾರಣೆ ಕಾಯ್ದೆ ಕಲಂ 109ರಡಿ ಖರೀದಿಸಲು ಮಾಡಿರುವ ಬೇಡಿಕೆ ಹಾಗೂ ನಮೂನೆ-15ಎ ಮತ್ತು ನಮೂನೆ-15ಎಎ ರಲ್ಲಿ ನೀಡಿದ ಮಾಹಿತಿ ಅನುಸರಿಸಿ ಉಪವಿಭಾಗಾಧಿಕಾರಿಗಳು, ಬೆಂಗಳೂರು ಉತ್ತರ ಉಪವಿಭಾಗ ರವರ ಪತ್ರದ ನಂ.ಎಲ್.ಆರ್.ಎಫ್. (ಬಿ.ಎನ್.ಎ.) ಸಿ.ಆರ್.214/07-08, ದಿನಾಂಕ:19.03.2008ರಲ್ಲಿ ಪ್ರಸ್ತಾವಿತ ಕಾಚೋಹಳ್ಳಿ ಗ್ರಾಮದ ಸ.ನಂ.43 ಹೊಸ ನಂ.69 ರಲ್ಲಿ 0-20 ಗುಂಟೆ ಜಮೀನನ್ನು ಖರೀದಿಸಲು ಸದರಿ ಸಂಸ್ಥೆಗೆ ಕರ್ನಾಟಕ ಭೂ ಸುಧಾರಣೆ ಕಾಯ್ದೆ 1961ರ ಕಲಂ 109 (1) (II) ರಡಿ ಅನುಮತಿ ನೀಡಲು ಶಿಫಾರಸ್ಸು ಮಾಡಿರುತ್ತಾರೆ.

ಸದರಿ ಸಂಸ್ಥೆಯು ನಂ.539/99-2000, ದಿನಾಂಕ:05.01.2000ರಂದು ನೊಂದಾಯಿಸಲ್ಪಟ್ಟಿದೆ. ಖಾತೆದಾರರಿಂದ ಜಮೀನು ಖರೀದಿಸಲು ಕರಾರು ಪತ್ರ ಮಾಡಿಕೊಂಡಿರುತ್ತಾರೆ.

ಪ್ರಸ್ತಾವಿತ ಜಮೀನು ಪರಿಶಿಷ್ಟ ಜಾತಿ/ ಪರಿಶಿಷ್ಟ ಪಂಗಡ (ಪಿ.ಟಿ.ಸಿ.ಎಲ್.) ಕಾಯ್ದೆ ಕರ್ನಾಟಕ ಭೂ ಮಂಜೂರಾತಿ ನಿಯಮಗಳು ಹಾಗೂ ಇನ್ನಿತರ ಪರಭಾರೆ ನಿಷೇಧ ಕಾಯ್ದೆಗಳ ವ್ಯಾಪ್ತಿಗೆ ಒಳಪಡುವುದಿಲ್ಲ.

ಕರ್ನಾಟಕ ಭೂ ಸುಧಾರಣೆ ಕಾಯ್ದೆ 1961ರ ಕಲಂ 109ರ ಪ್ರಕಾರ ಶೈಕ್ಷಣಿಕ ಉದ್ದೇಶಕ್ಕೆ 4 ಯುನಿಟ್‌ಗಳವರೆಗೆ ಜಮೀನು ಹೊಂದಲು ಅವಕಾಶ ಕಲ್ಪಿಸಿದೆ. ಈ ಪ್ರಸ್ತಾವನೆ ಕರ್ನಾಟಕ ತಿದ್ದುಪಡಿ ಕಾಯ್ದೆ 1995 ರ ಪ್ರಕಾರ ಕಲಂ 109 (1) (II) ಮತ್ತು ಕರ್ನಾಟಕ ಭೂ ಸುಧಾರಣೆ ತಿದ್ದುಪಡಿ ಕಾಯಿದೆ 1961 ಕಲಂ 63, 79ಎ, 79ಬಿ ಅಥವಾ 80ಕ್ಕೆ ವಿನಾಯ್ತಿ ನೀಡಿ ಬೆಂಗಳೂರು ಉತ್ತರ ತಾಲ್ಲೂಕು, ದಾಸನಪುರ ಹೋಬಳಿ, ಕಾಚೋಹಳ್ಳಿ ಗ್ರಾಮದ ಸ.ನಂ.43 ಹೊಸ ನಂ.69 ರಲ್ಲಿ 0-20 ಗುಂಟೆ ಜಮೀನನ್ನು ಎ.ವಿ.ಕೆ. ಟ್ರಸ್ಟ್, ನಂ.8/9, 27ನೇ ಕ್ರಾಸ್, ಮಾನೋಟೈಪ್ ಎದುರು, ಬನಶಂಕರಿ 2ನೇ ಹಂತ, ಬೆಂಗಳೂರು-560070 ರವರಿಗೆ ಶೈಕ್ಷಣಿಕ ಉದ್ದೇಶಕ್ಕಾಗಿ ಖರೀದಿಸಲು ಕರ್ನಾಟಕ ಭೂ ಸುಧಾರಣೆ ಕಾಯ್ದೆ 1961 ಕಲಂ 109 (1) (II) ರಡಿ ಹಾಗೂ ಸರ್ಕಾರದ ತಿದ್ದುಪಡಿ ಅಧಿಸೂಚನೆ ನಂ.ವ್ಯಶಾಇ 47 ಶಾಸನ 2001 ಬೆಂಗಳೂರು ದಿನಾಂಕ:23.04.2003 ರಂತೆ ಶೈಕ್ಷಣಿಕ ಉದ್ದೇಶಕ್ಕೆ 2 ಯುನಿಟ್‌ಗಳಿದ್ದು, ಜಮೀನನ್ನು ಹೊಂದಲು ಅವಕಾಶ ಕಲ್ಪಿಸಿದೆ. ಹಾಗೂ ಈ ಕೆಳಕಂಡ ಷರತ್ತುಗಳಿಗೆ ಒಳಪಡಿಸಿ ಅನುಮತಿ ನೀಡಿದೆ.

**ಷರತ್ತುಗಳು**

1) ಯಾವ ಉದ್ದೇಶಕ್ಕಾಗಿ ಜಮೀನನ್ನು ಖರೀದಿಸಲು ಅನುಮತಿ ನೀಡಲಾಗಿದೆಯೋ ಅದೇ ಉದ್ದೇಶಕ್ಕಾಗಿ ಸದರಿ ಜಮೀನನ್ನು ಎರಡು ವರ್ಷದೊಳಗಾಗಿ ಉಪಯೋಗಿಸಿಕೊಳ್ಳತಕ್ಕದ್ದು ಮತ್ತು ಈ ಬಗ್ಗೆ ತಹಸೀಲ್ದಾರ್‌ರವರ ಮೂಲಕ ಈ ಕಛೇರಿಗೆ ಲಿಖಿತವಾಗಿ ಮಾಹಿತಿ ನೀಡತಕ್ಕದ್ದು.

2) ವಿನಾಯಿತಿ ಪಡೆದವರು ಸರ್ಕಾರ ಅಥವಾ ಯಾವುದೇ ಷೆಡ್ಯೂಲ್ ಬ್ಯಾಂಕ್ ಅಥವಾ ಸಹಕಾರ ಕೃಷಿ ಮತ್ತು ಗ್ರಾಮೀಣಾಭಿವೃದ್ಧಿ ಬ್ಯಾಂಕ್ ಒಂದಕ್ಕೆ ಅಥವಾ ಕಂಪನಿ ಕಾಯಿದೆ 1995 ಕಲಂ 3ರಲ್ಲಿ ಹೇಳಿರುವಂತೆ ಶೇಕಡಾ 55 ಪೆಯಿಡ್ ಆಫ್ ಷೇರು ಬಂಡವಾಳ ಹೊಂದಿರುವ ಕೇಂದ್ರ ಸರ್ಕಾರ ಅಥವಾ ರಾಜ್ಯ ಸರ್ಕಾರದ ಸಂಘ ಸಂಸ್ಥೆ ಒಂದಕ್ಕೆ ಖಾತರಿ ನೀಡಿ ಅಡಮಾನ ಹಾಗೂ ಇತರೆ ಹೊಣೆಮಾಡಿ ಸಾಲ ಪಡೆಯುವುದನ್ನು ಹೊರತುಪಡಿಸಿ ಸದರಿ ಜಮೀನನ್ನು ನಿಗದಿತ ಉದ್ದೇಶಕ್ಕಲ್ಲದೆ ಬೇರೆ ಉದ್ದೇಶಕ್ಕೆ ಬಳಸತಕ್ಕದ್ದಲ್ಲ.

3) ಸದರಿ ಜಮೀನು ಸಿ.ಡಿ.ಪಿ. ಪ್ರಕಾರ ಹಸಿರು ವಲಯದಲ್ಲಿ ಬರುತ್ತಿದ್ದು, ಶೈಕ್ಷಣಿಕ ಉದ್ದೇಶಕ್ಕಾಗಿ ಉಪಯೋಗಿಸಿಕೊಳ್ಳತಕ್ಕದ್ದು. ಇದನ್ನು ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರದ ಅನುಮತಿ ಪಡೆಯದೆ ಹಾಗೂ ಅನ್ಯಕ್ರಾಂತ ಪಡಿಸದೆ ಬೇರೆ ಉದ್ದೇಶಕ್ಕೆ ಬಳಸತಕ್ಕದ್ದಲ್ಲ.

4) ಈ ಜಮೀನನ್ನು ವ್ಯವಸಾಯದಿಂದ ವ್ಯವಸಾಯೇತರ ಉದ್ದೇಶಕ್ಕಾಗಿ ಪರಿವರ್ತಿಸಿಕೊಳ್ಳಲು ಭೂ ಕಂದಾಯ ಕಾಯಿದೆ 1964ರ ಕಲಂ 95ರಂತೆ ಜಿಲ್ಲಾಧಿಕಾರಿಗಳಿಂದ ಅನುಮತಿ ಪಡೆಯಬೇಕು. ಅನಧಿಕೃತ ಕಟ್ಟಡಗಳನ್ನು ಸಕ್ರಮಗೊಳಿಸುವ ಷರತ್ತಿಗೆ ಒಳಪಡಿಸಿದೆ.

5) ಈ ಜಮೀನು ನಗರಾಭಿವೃದ್ಧಿ ಪ್ರಾಧಿಕಾರ, ಬೆಂಗಳೂರು ಇವರಿಂದ ಸಿ.ಡಿ.ಪಿ., ಒ.ಡಿ.ಪಿ ಮತ್ತು ಹಸಿರು ವಲಯ ವ್ಯಾಪ್ತಿಯೊಳಗೆ ಬಂದರೆ ಅದರಂತೆ ಅನುಮತಿ ಪಡೆದು ಉಪಯೋಗಿಸಿಕೊಳ್ಳತಕ್ಕದ್ದು.

6) ಮೇಲಿನ ಷರತ್ತುಗಳು ಉಲ್ಲಂಘನೆಯಾದಲ್ಲಿ ಈಗ ನೀಡಲಾದ ಅನುಮತಿಯನ್ನು ರದ್ದುಪಡಿಸಲಾಗುವುದು ಮತ್ತು ಪ್ರಸ್ತಾಪಿತ ಭೂಮಿಯನ್ನು ಋಣ ಮುಕ್ತವಾಗಿ ಸರ್ಕಾರದಲ್ಲಿ ನಿಹಿತ ಮಾಡಲಾಗುವುದು.

7) ಈ ಅನುಮತಿ ಭೂ ಸುಧಾರಣೆ ಕಾಯಿದೆ 1961ರ ಕಲಂ 109 ರನ್ವಯ ಮಾತ್ರ ಮಾಡಿರುತ್ತದೆ. ಬೇರೆ ಕಾನೂನುಗಳಿಗೆ ಉಲ್ಲಂಘನೆಯಾದಲ್ಲಿ ಸಂಬಂಧಿಸಿದ ಕಾಯ್ದೆಯಡಿ ಅಗತ್ಯ ಕ್ರಮ ಜರುಗಿಸಲು ಅವಕಾಶವಿರುತ್ತದೆ.

ವಿಶೇಷ ಜಿಲ್ಲಾಧಿಕಾರಿಗಳು (ಕಂ),
ಬೆಂಗಳೂರು ಜಿಲ್ಲೆ, ಬೆಂಗಳೂರು.

ಪಿ.ಆರ್.657

**ನಿರ್ದೇಶಕರು, ಗಣಿ ಮತ್ತು ಭೂ ವಿಜ್ಞಾನ ಇಲಾಖೆ, ಬೆಂಗಳೂರು ರವರ ನಡವಳಿ**

**ವಿಷಯ:** ಬೆಂಗಳೂರು ಜಿಲ್ಲೆ, ಚನ್ನಪಟ್ಟಣ ತಾಲ್ಲೂಕು, ಅಂಕುಶನಹಳ್ಳಿ ಗ್ರಾಮದಲ್ಲಿ ಮಲ್ಟಿಕಲರ್ ಗ್ರಾನೈಟ್‌ಗಾಗಿ ಶ್ರೀ ಬಿ.ಆರ್.ಎಸ್. ಕುಮಾರ್‌ರವರಿಗೆ ಮಂಜೂರಾಗಿದ್ದ ಕಲ್ಲು ಗಣಿ ಗುತ್ತಿಗೆ ಸಂಖ್ಯೆ:329ರ ಗುತ್ತಿಗೆಯನ್ನು ಗುತ್ತಿಗೆಯ ಮೇಲಿನ ಬಾಕಿ ರೂ.1,70,047/–ಗಳನ್ನು ಪಾವತಿಸದೆ ಇದ್ದ ಕಾರಣ ರದ್ದುಗೊಳಿಸುತ್ತಿರುವ ಬಗ್ಗೆ.

**ಉಲ್ಲೇಖ:** 1) ಕ.ಉ.ಖ.ರಿ.ನಿ.94ರ ನಿಯಮ 6(1) ಮತ್ತು ನಿಯಮ 39ರಡಿ ಈ ಕಛೇರಿಯಿಂದ ಜಾರಿಯಾದ ನೋಟೀಸ್ ಸಂಖ್ಯೆ: ಗಭೂಇ:ಡಿಸಿಬಿ:ಕಗಗು:329:2007–08:3198–200, ದಿನಾಂಕ:13.12.2005.

2) ಉಪನಿರ್ದೇಶಕರು, ಕನಕಪುರರವರ ಪತ್ರ ಸಂಖ್ಯೆ: ಗಭೂಇ: ಡಿಸಿಬಿ: ಕಗಗು:329:2007–08:12294, ದಿನಾಂಕ:13.12.2007.

**ಪ್ರಸ್ತಾವನೆ:**

ಬೆಂಗಳೂರು ಜಿಲ್ಲೆ, ಚನ್ನಪಟ್ಟಣ ತಾಲ್ಲೂಕು, ಅಂಕುಶನಹಳ್ಳಿ ಸರ್ವೆ ನಂ.20 ರಲ್ಲಿ ಶ್ರೀ ಬಿ.ಆರ್.ಎಸ್. ಕುಮಾರ್ ರವರಿಗೆ 2–20 ಎಕರೆಗೆ ದಿನಾಂಕ:17.05.2000 ರಿಂದ 10 ವರ್ಷಗಳಿಗಾಗಿ ಕಲ್ಲು ಗಣಿ ಗುತ್ತಿಗೆ ಮಂಜೂರು ಮಾಡಲಾಗಿತ್ತು. ಈ ಕಛೇರಿಯ ಅಂತಿಮ ನೋಟೀಸು ಸಂಖ್ಯೆ: ಡಿಸಿಬಿ:ಕಗಗು 329/ 3198–200, ದಿನಾಂಕ:06.08.2005ರಲ್ಲಿ ಗುತ್ತಿಗೆದಾರರಿಗೆ ನಿಯಮಾನುಸಾರ ಸೂಚನಾ ಪತ್ರ ನೀಡಿತ್ತು. 2007 ಮಾರ್ಚ್ ಅಂತ್ಯದವರೆಗೆ ಬಾಕಿ ರೂ.1,70,047/–ಗಳನ್ನು 60 ದಿನಗಳೊಳಗೆ ಸಂದಾಯಿಸುವಂತೆ ಹಾಗೂ ಗಣಿಗಾರಿಕೆ ಕೈಗೊಳ್ಳದೆ ಒಂದು ವರ್ಷಕ್ಕಿಂತ ಹೆಚ್ಚಿನ ಅವಧಿಗೆ ನಿಷ್ಕ್ರೀಯವಾಗಿ ಇಟ್ಟ ಬಗ್ಗೆ ಸಮಜಾಯಿಸಿ ಕೇಳಿ ಕರ್ನಾಟಕ ಉಪ ಖನಿಜ ರಿಯಾಯಿತಿ ನಿಯಮ 1994ರ ನಿಯಮ 6(1) ಹಾಗೂ ನಿಯಮ 39ರಡಿ ನೋಟೀಸು ಜಾರಿಗೊಳಿಸಲಾಗಿತ್ತು. ಆದರೆ ಸದರಿ ಗುತ್ತಿಗೆದಾರರಿಂದ ಇದುವರೆವಿಗೂ ಬಾಕಿ ಪಾವತಿಯಾಗಿರುವುದಿಲ್ಲ. ಹಾಗೂ ಗುತ್ತಿಗೆ ನಿಷ್ಕ್ರೀಯವಾಗಿರುವುದರಿಂದ ಈ ಬಗ್ಗೆ ಸಮಜಾಯಿಸಿ ಬಂದಿರುವುದಿಲ್ಲ.

ಗಣಿ ಮತ್ತು ಭೂವಿಜ್ಞಾನ ಇಲಾಖೆಯ ನಿರ್ದೇಶಕರ ಗಮನಕ್ಕೆ ಬಂದಂತೆ ಗುತ್ತಿಗೆದಾರರು ಮೇಲಿನ ಉಲ್ಲೇಖಿತ ನೋಟೀಸುಗಳಿಗೆ ಗುತ್ತಿಗೆದಾರರು ಯಾವ ರೀತಿಯು ಸ್ಪಂದಿಸಿರುವುದಿಲ್ಲವಾದ ಕಾರಣ ಕರ್ನಾಟಕ ಉಪ ಖನಿಜ ರಿಯಾಯಿತಿ ನಿಯಮ 1994ರ ನಿಯಮ 6(1) ಮತ್ತು ನಿಯಮ 39 ರಡಿ ಸರ್ಕಾರದ ಅಧಿಸೂಚನೆ–III ಸಂಖ್ಯೆ: ಸಿಐ 418 ಎಂ.ಆರ್.ಸಿ.92 ದಿನಾಂಕ:02.07.1994 ಪ್ರತ್ಯೋಜಿಸಿರುವ ಅಧಿಕಾರದಂತೆ ಕಲ್ಲುಗಣಿ ಗುತ್ತಿಗೆ ಸಂಖ್ಯೆ: ರಡಿ ಕ್ರಮ ಜರುಗಿಸುವುದು ಅವಶ್ಯಕವಾದ್ದರಿಂದ ಈ ಕೆಳಗಿನಂತೆ ಆದೇಶ.

**ಆದೇಶ ಸಂಖ್ಯೆ: ಗಭೂಇ:ಕಗಗು:329:2007-08/4278, ದಿನಾಂಕ:13ನೇ ಜೂನ್, 2008**

ಕರ್ನಾಟಕ ಉಪ ಖನಿಜ ರಿಯಾಯಿತಿ ನಿಯಮ 1994ರ ನಿಯಮ 6(1) ಮತ್ತು ನಿಯಮ 39ರಂತೆ ಗಣಿ ಮತ್ತು ಭೂ ವಿಜ್ಞಾನ ಇಲಾಖೆಯ ನಿರ್ದೇಶಕರಿಗೆ ಪ್ರತ್ಯೋಜಿಸಿರುವ ಅಧಿಕಾರದಡಿಯಲ್ಲಿ ಬೆಂಗಳೂರು ಜಿಲ್ಲೆ, ಚನ್ನಪಟ್ಟಣ ತಾಲ್ಲೂಕು, ಅಂಕುಶನಹಳ್ಳಿ ಗ್ರಾಮದ ಸರ್ವೆ ನಂ.20ರಲ್ಲಿ 2.20 ಎಕರೆಗೆ ಮಲ್ಟಿಕಲರ್ ಗ್ರಾನೈಟ್‌ಗಾಗಿ ನೀಡಿದ್ದ ಕಲ್ಲು ಗಣಿ ಗುತ್ತಿಗೆ ಸಂಖ್ಯೆ: 329ನ್ನು ತಕ್ಷಣದಿಂದ ಜಾರಿಗೆ ಬರುವಂತೆ ಗುತ್ತಿಗೆಯನ್ನು ರದ್ದುಪಡಿಸಲಾಗಿದೆ. ಹಾಗೂ ಈ ಗುತ್ತಿಗೆಗೆ ಸಲ್ಲಿಸಿದ್ದ ಭದ್ರತಾ ಠೇವಣಿಯನ್ನು ಇಲಾಖೆಗೆ ಮುಟ್ಟುಗೋಲು ಹಾಕಿ ಕೊಳ್ಳಲಾಗಿದೆ.

ಪಿ.ಆರ್.665 ನಿರ್ದೇಶಕರು.

**ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳ ನಿರ್ದೇಶನಾಲಯದ ನಡವಳಿಗಳು, ಬೆಂಗಳೂರು**

**ವಿಷಯ:** ಶ್ರೀ ಕೆ.ಜಿ. ರೆಜಿಮಾನ್, ಶುಶ್ರೂಷಕರು, ಇವರ ಅನಧಿಕೃತ ಗೈರು ಹಾಜರಿ ಬಗ್ಗೆ ಅಂತಿಮ ಆದೇಶ.

**ಓದಲಾಗಿದೆ:**
1) ವೈದ್ಯಾಧಿಕಾರಿಗಳು, ಸಾ.ಅ. ಬೇಲೂರು, ಇವರ ಪತ್ರಸಂಖ್ಯೆ: ಸಾಅಬೇ: 03: 06-07, ದಿನಾಂಕ:11.12.2006.
2) ಜಿಲ್ಲಾ ಆಕುಕ ಅಧಿಕಾರಿಗಳು, ಹಾಸನ ಇವರ ದೋಷಾರೋಪಣೆ ಹಾಗೂ ತಿಳುವಳಿಕೆಯ ಪತ್ರ ಸಂಖ್ಯೆ: ಸಿಬ್ಬಂದಿ (3) 14:06-07, ದಿನಾಂಕ:08.05.2007.
3) ವಿಚಾರಣಾಧಿಕಾರಿಗಳ ನೇಮಕಾತಿ ಆದೇಶ ಸಂಖ್ಯೆ: ಸಿಬ್ಬಂದಿ (3) 14: 06-07, ದಿನಾಂಕ:23.08.2007.
4) ವಿಚಾರಣಾ ವರದಿಯ ಸಂಖ್ಯೆ: ತಾಅಅಬೇ:1:07-08, ದಿನಾಂಕ:11.09.2007.
5) ಪತ್ರಿಕಾ ಪ್ರಕಟಣೆ ದಿನಾಂಕ:20.11.2007 ಮತ್ತು 22.11.2007.
6) ಜಿಲ್ಲಾ ಆಕುಕ ಅಧಿಕಾರಿಗಳು, ಹಾಸನ ಇವರ ಪತ್ರ ಸಂಖ್ಯೆ: ಸಿಬ್ಬಂದಿ (3) 14:06-07, ದಿನಾಂಕ:28.03.2008.

**ಪ್ರಸ್ತಾವನೆ:**

ಶ್ರೀ ಕೆ.ಜಿ. ರೆಜಿಮಾನ್, ಶುಶ್ರೂಷಕರು, ಇವರು ಸಾರ್ವಜನಿಕ ಆಸ್ಪತ್ರೆ, ಬೇಲೂರು ಹಾಸನ ಜಿಲ್ಲೆ, ಇಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾಗ ದಿನಾಂಕ:09.12.2005 ರಿಂದ 58 ದಿನ ಗಳಿಕೆ ರಜೆಗೆ ಅರ್ಜಿ ನೀಡಿ ನಂತರ ಸರ್ಕಾರಿ ಸೇವೆಗೆ ಅನಧಿಕೃತ ಗೈರು ಹಾಜರಿಯಾಗಿದ್ದು ಇವರ ಬಗ್ಗೆ ಮೇಲೆ ಓದಲಾದ (1)ರಲ್ಲಿ ಕರ್ತವ್ಯಕ್ಕೆ ಹಿಂತಿರುಗಲು ಮೂರು ಪತ್ರ ಬರೆದಿದ್ದರೂ ಕರ್ತವ್ಯಕ್ಕೆ ಹಾಜರಾಗಿರುವುದಿಲ್ಲವೆಂದು ವರದಿ ನೀಡಿರುತ್ತಾರೆ. ಮೇಲೆ ಓದಲಾದ (2)ರಲ್ಲಿ ನೌಕರರಿಗೆ ದೋಷಾರೋಪಣಾ ಪಟ್ಟಿಯನ್ನು ಜಾರಿಗೊಳಿಸಿದ್ದು ವಿಳಾಸದಾರರು ಹೊರದೇಶಕ್ಕೆ ಹೋಗಿರುತ್ತಾರೆ ಎಂಬ ಷರಾದೊಂದಿಗೆ ಲಕೋಟೆ ವಾಪಸ್ಸು ಬಂದಿದ್ದು ಪ್ರಕರಣದ ಸತ್ಯಾಸತ್ಯತೆ ಕಂಡುಕೊಳ್ಳಲು ಮೇಲೆ ಓದಲಾದ (3)ರಲ್ಲಿ ತಾಲ್ಲೂಕು ಆರೋಗ್ಯಾಧಿಕಾರಿಗಳು, ಬೇಲೂರು ಇವರನ್ನು ವಿಚಾರಣಾಧಿಕಾರಿಯನ್ನಾಗಿ ಜಿಲ್ಲಾ ಆರೋಗ್ಯ ಮತ್ತು ಕುಟುಂಬ ಕಲ್ಯಾಣಾಧಿಕಾರಿಗಳು, ಹಾಸನ ಇವರು ನೇಮಿಸಿರುತ್ತಾರೆ. ಮೇಲೆ ಓದಲಾದ (4)ರಲ್ಲಿ ವಿಚಾರಣಾಧಿಕಾರಿಗಳು, ವಿಚಾರಣಾ ವರದಿ ಸಲ್ಲಿಸಿದ್ದು ನೌಕರರ ಅನಧಿಕೃತ ಗೈರು ಹಾಜರಿ ಸಾಬೀತಾಗಿದ್ದು ನೌಕರರು ವಿದೇಶದಲ್ಲಿ ನೆಲಸಿರುವ ಬಗ್ಗೆ ತಿಳಿದು ಬಂದಿದೆ ಎಂದು ತಿಳಿಸಿರುತ್ತಾರೆ. ನಂತರ ಮೇಲೆ ಓದಲಾದ (5)ರಲ್ಲಿ ಈ ಬಗ್ಗೆ ವಿಜಯ ಕರ್ನಾಟಕ ಮತ್ತು ಹಾಸನ ಮಿತ್ರ ಪತ್ರಿಕೆಗಳಲ್ಲಿ ಪ್ರಕಟಣೆ ಹೊರಡಿಸಿದ್ದು ನೌಕರರು ಲಿಖಿತ ಅಹವಾಲನ್ನು ಸಲ್ಲಿಸದೇ ಇರುವುದರಿಂದ ಕ್ರಮ ಕೈಗೊಳ್ಳಲು ಕೋರಿ ಎಲ್ಲಾ ದಾಖಲೆಗಳೊಂದಿಗೆ ಮೇಲೆ ಓದಲಾದ (6)ರಲ್ಲಿ ಜಿಲ್ಲಾ ಆರೋಗ್ಯ ಮತ್ತು ಕುಟುಂಬ ಕಲ್ಯಾಣಾಧಿಕಾರಿಗಳು, ಹಾಸನ, ಇವರು ಪ್ರಸ್ತಾವನೆ ಸಲ್ಲಿಸಿರುತ್ತಾರೆ.

ನೌಕರರಿಗೆ ಸಾಕಷ್ಟು ಕಾಲಾವಕಾಶ ನೀಡಿ ಪತ್ರಿಕಾ ಪ್ರಕಟಣೆ ನೀಡಿದ್ದರೂ ನೌಕರರು ಲಿಖಿತ ಅಹವಾಲನ್ನು ಸಲ್ಲಿಸದೇ ಇರುವುದರಿಂದ ವಿಚಾರಣಾಧಿಕಾರಿಗಳು ನೀಡಿರುವ ವಿಚಾರಣಾ ವರದಿ ಮತ್ತು ಜಿಲ್ಲಾ ಆರೋಗ್ಯ ಮತ್ತು ಕುಟುಂಬ ಕಲ್ಯಾಣಾಧಿಕಾರಿಗಳು, ಹಾಸನ ಇವರ ಶಿಫಾರಸ್ಸನ್ನು ಪರಿಶೀಲಿಸಿದ ತರುವಾಯ ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಆದೇಶ ಸಂಖ್ಯೆ: ಡಿಪಿಎಸ್ (3) ಸಿಆರ್-20: 2007-08, ಬೆಂಗಳೂರು, ದಿನಾಂಕ:2ನೇ ಜೂನ್, 2008**

1957ರ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳ ಅಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಡಾ: ಉಷಾ ವಾಸುನ್‌ಕರ್, ನಿರ್ದೇಶಕರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು, ಬೆಂಗಳೂರು, ಆದ ನಾನು ಶ್ರೀ ಕೆ.ಜೆ. ರೆಜಿಮಾನ್, ಶುಶ್ರೂಷಕರು, ಸಾರ್ವಜನಿಕ ಆಸ್ಪತ್ರೆ, ಬೇಲೂರು ಹಾಸನ ಜಿಲ್ಲೆ, ಇವರು ಸರ್ಕಾರಿ ಸೇವೆಗೆ ದಿನಾಂಕ:09.12.2005 ರಿಂದ ಅನಧಿಕೃತ ಗೈರುಹಾಜರಿಯಾಗಿರುವ ಕಾರಣ ಹಾಗೂ ಸಕ್ಷಮ ಪ್ರಾಧಿಕಾರಿಯಿಂದ ಪೂರ್ವಾನುಮತಿಯಿಲ್ಲದೇ ವಿದೇಶಕ್ಕೆ ಹೋಗಿರುವ ಕಾರಣ ದಂಡನೆಯಾಗಿ ಸದರಿ ನಿಯಮ 8(viii) ರ ಪ್ರಕಾರ ತಕ್ಷಣದಿಂದ ಜಾರಿಗೆ ಬರುವಂತೆ ಸರ್ಕಾರಿ ಸೇವೆಯಿಂದ ವಜಾಗೊಳಿಸಿ ಆದೇಶಿಸಿರುತ್ತೇನೆ.

**ಡಾ: ಉಷಾವಾಸುನ್‌ಕರ್,**

ಪಿ.ಆರ್.608 ನಿರ್ದೇಶಕರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು, ಬೆಂಗಳೂರು.

## ಕಂದಾಯ ಇಲಾಖೆ

## ಅಧಿಸೂಚನೆ

**ಸಂಖ್ಯೆ: ಕಂಇ 293 ಮನೋಮು 2005(ಭಾಗ–2), ಬೆಂಗಳೂರು, ದಿನಾಂಕ:6ನೇ ಡಿಸೆಂಬರ್, 2008**

ಬೆಂಗಳೂರು ಮೆಟ್ರೋ ರೈಲ್ ನಿಗಮ ನಿಯಮಿತ ಸಂಸ್ಥೆಯು ನ್ಯೂಕ್ಲಿಯರ್ ಪವರ್ ಕಾರ್ಪೋರೇಷನ್ ಆಫ್ ಇಂಡಿಯಾ ಲಿಮಿಟೆಡ್ ಸಂಸ್ಥೆಯಿಂದ ಬೆಂಗಳೂರಿನ ಬೈಯಪ್ಪನಹಳ್ಳಿ ಬಳಿ ರೂ.92.24 ಕೋಟಿಗಳಿಗೆ (ತೊಂಭತ್ತೆರಡು ಕೋಟಿ ಇಪ್ಪತ್ನಾಲ್ಕು ಲಕ್ಷ ರೂಪಾಯಿಗಳಿಗೆ ಮಾತ್ರ) ಖರೀದಿಸಲಿರುವ 25.635 ಎಕರೆ ಜಮೀನಿನ ನೋಂದಣಿಗೆ ತಗಲುವ ಮುದ್ರಾಂಕ ಶುಲ್ಕ ರೂ.7,81,73,400ಗಳ (ಏಳು ಕೋಟಿ ಎಂಭತ್ತೊಂದು ಲಕ್ಷದ ಎಪ್ಪತ್ಮೂರು ಸಾವಿರದ ನಾಲ್ಕುನೂರು ರೂಪಾಯಿಗಳು ಮಾತ್ರ) ಪಾವತಿಯಿಂದ ಶೇ.50 ರಷ್ಟು ವಿನಾಯಿತಿ ಮತ್ತು ನೋಂದಣಿ ಶುಲ್ಕ ರೂ.92,24,000/–ಗಳ (ತೊಂಭತ್ತೆರಡು ಲಕ್ಷದ ಇಪ್ಪತ್ನಾಲ್ಕು ಸಾವಿರ ರೂಪಾಯಿಗಳು ಮಾತ್ರ) ಪಾವತಿಯಿಂದ ಶೇ.50 ರಷ್ಟು ವಿನಾಯಿತಿಯನ್ನು ನೀಡಲಾಗಿದೆ.

ಸದರಿ ಸಂಸ್ಥೆಯು ರೂ.20 ಕೋಟಿಗಳಿಂದ ರೂ.3000 ಕೋಟಿಗಳಿಗೆ ಷೇರು ಬಂಡವಾಳವನ್ನು ಹೆಚ್ಚಿಸಿದ್ದು, ಹೆಚ್ಚಿಸಲಾದ ಬಂಡವಾಳ ರೂ.2980 ಕೋಟಿಗಳಿಗೆ ತಗಲುವ ಸಂಚಿತ ಮುದ್ರಾಂಕ ಶುಲ್ಕ ರೂ.1,49,00,000/–ಗಳ (ಒಂದು ಕೋಟಿ ನಲವತ್ತೊಂಭತ್ತು ಲಕ್ಷ ರೂಪಾಯಿಗಳು ಮಾತ್ರ) ಪಾವತಿಯಿಂದ ಶೇ.50 ರಷ್ಟು ವಿನಾಯಿತಿ ನೀಡಲಾಗಿದೆ.

ಸದರಿ ಸಂಸ್ಥೆಯು ಪಾವತಿಸಬೇಕಾದ ಮುದ್ರಾಂಕ ಶುಲ್ಕ ಸೇರಿದಂತೆ ರಾಜ್ಯದ ಇತರೆ ಶುಲ್ಕಗಳಿಗೆ ವಿನಾಯಿತಿ ನೀಡಲು ರಾಜ್ಯ ಸರ್ಕಾರವು ಬದ್ಧವಾಗಿರುವುದರಿಂದ ಬಾಕಿ ಶೇ.50ರಷ್ಟು ಮುದ್ರಾಂಕ ಮತ್ತು ನೋಂದಣಿ ಶುಲ್ಕದ ಮೊತ್ತವನ್ನು ನಗರಾಭಿವೃದ್ಧಿ ಇಲಾಖೆಯ ಯೋಜನೆ ಆಯವ್ಯಯದಲ್ಲಿ ಅನುದಾನ ಒದಗಿಸಿ ಸರ್ಕಾರವು ಸದರಿ ಸಂಸ್ಥೆಗೆ ಮರುಪಾವತಿಸುವುದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಟಿ.ಕೆ. ರಾಮಚಂದ್ರ**

ಸರ್ಕಾರದ ಅಧೀನ ಕಾರ್ಯದರ್ಶಿ,

ಕಂದಾಯ ಇಲಾಖೆ (ನೋಂದಣಿ ಮತ್ತು ಮುದ್ರಾಂಕ)

ಪಿ.ಆರ್.1396

## ಕರ್ನಾಟಕ ಲೋಕಸೇವಾ ಆಯೋಗ

## "ಉದ್ಯೋಗ ಸೌಧ", ಬೆಂಗಳೂರು–1

## ಅಧಿಸೂಚನೆ

**ಸಂಖ್ಯೆ: ಇ(1)166/2008–09/ ಪಿಎಸ್‌ಸಿ, ದಿನಾಂಕ:26ನೇ ಜುಲೈ, 2008**

**ವಿಷಯ:** 2007ನೇ ಸಾಲಿನ ಸಹಾಯಕ ಕಾರ್ಯಪಾಲಕ ಅಭಿಯಂತರರ ಪರೀಕ್ಷೆಯಲ್ಲಿ ಪರೀಕ್ಷಾ ಸೂಚನೆಗಳನ್ನು ಉಲ್ಲಂಘಿಸಿದ ಶ್ರೀ ಶ್ರೀನಿವಾಸ ರಾವ್ ಬಿ.ಎಸ್. (ನೋಂ.ಸಂ.3311) ಅಭ್ಯರ್ಥಿಗೆ ದಂಡನೆ ವಿಧಿಸುವ ಬಗ್ಗೆ.

**ಓದಲಾಗಿದೆ:** 1) ಶ್ರೀ ಶ್ರೀನಿವಾಸ ರಾವ್ ಬಿ.ಎಸ್, ಇವರು 2007ನೇ ಸಾಲಿನ ಸಹಾಯಕ ಕಾರ್ಯಪಾಲಕ ಅಭಿಯಂತರರ ಹುದ್ದೆಗೆ ಸಲ್ಲಿಸಿದ ಅರ್ಜಿ.

2) ಶ್ರೀ ಶ್ರೀನಿವಾಸ್ ರಾವ್ ಬಿ.ಎಸ್, ಇವರಿಗೆ ಜಾರಿ ಮಾಡಿರುವ ಕಾರಣ ಕೇಳುವ ನೋಟೀಸಿನ ಸಂಖ್ಯೆ: ಆರ್.ಹೆಚ್.ಎಸ್. 386/2007–08/ ಪಿಎಸ್‌ಸಿ, ದಿನಾಂಕ:06.03.2008.

3) ಶ್ರೀ ಶ್ರೀನಿವಾಸ ರಾವ್ ಬಿ.ಎಸ್. ಇವರಿಗೆ ಜಾರಿ ಮಾಡಿರುವ ಕಾರಣ ಕೇಳುವ ನೋಟೀಸಿನ ಸಂಖ್ಯೆ: ಆರ್.ಹೆಚ್.ಎಸ್. 12/2008–09/ ಪಿಎಸ್‌ಸಿ, ದಿನಾಂಕ:15.04.2008.

**ಪ್ರಸ್ತಾವನೆ:**

ಮೇಲೆ ಓದಲಾದ 1ರನ್ವಯ ಶ್ರೀ ಶ್ರೀನಿವಾಸ ರಾವ್ ಬಿ.ಎಸ್. ಇವರು 2007ನೇ ಸಾಲಿನ ಸಹಾಯಕ ಕಾರ್ಯಪಾಲಕ ಅಭಿಯಂತರರ ಪರೀಕ್ಷೆಗೆ ಸಲ್ಲಿಸಿದ್ದ ಅರ್ಜಿಯ ಮೇರೆಗೆ ಇವರಿಗೆ ಸದರಿ ಪರೀಕ್ಷೆ ತೆಗೆದುಕೊಳ್ಳಲು ನೋಂದಣಿ ಸಂಖ್ಯೆ: 3311ರ ಪ್ರವೇಶ ಪತ್ರವನ್ನು ಜಾರಿ ಮಾಡಲಾಗಿತ್ತು. ಅದರಂತೆ ಇವರು ಇರಿಗೇಷನ್ ಪತ್ರಿಕೆ ಪರೀಕ್ಷೆಗೆ ಹಾಜರಾಗಿ ಉತ್ತರ ಪತ್ರಿಕೆಯಲ್ಲಿ ಯಾವುದೇ ಪ್ರಶ್ನೆ ಸಂಖ್ಯೆಯನ್ನು ನಮೂದಿಸದೆ ಕೆಲವು ಅಂಕಿ ಅಂಶಗಳು ಮತ್ತು ವಿವರಣೆಯನ್ನು ಪೆನ್ಸಿಲ್‌ನಲ್ಲಿ ಬರೆದಿದ್ದು, ಕೊನೆಯ ಎರಡು ಪುಟಗಳಲ್ಲಿ ಯಾವುದೇ ಪ್ರಶ್ನೆ ಸಂಖ್ಯೆಯನ್ನು ನಮೂದಿಸದೇ ಪೆನ್ನಿನಲ್ಲಿ ಬರೆದಿದ್ದು, ಪರೀಕ್ಷಾ ಸೂಚನೆಗಳನ್ನು ಉಲ್ಲಂಘಿಸಿರುತ್ತಾರೆ ಎಂಬುದಾಗಿ ಪರೀಕ್ಷಕರು ವರದಿ ಮಾಡಿದ್ದ ಕಾರಣ ಮೇಲೆ ಓದಲಾದ (2) ರನ್ವಯ ಸದರಿ ಅಭ್ಯರ್ಥಿಗೆ ಕಾರಣ ಕೇಳುವ ನೋಟೀಸನ್ನು ಜಾರಿ ಮಾಡಲಾಗಿತ್ತು. ಈ ನೋಟೀಸಿಗೆ ಸದರಿ ಅಭ್ಯರ್ಥಿಯು ಯಾವುದೇ ಉತ್ತರವನ್ನು ನೀಡಿರುವುದಿಲ್ಲ. ಆದುದರಿಂದ ಮೇಲೆ ಓದಲಾದ (3)ರನ್ವಯ ಸದರಿ ಅಭ್ಯರ್ಥಿಗೆ ಕಾರಣ ಕೇಳುವ ಮತ್ತೊಂದು ಅಂತಿಮ ನೋಟೀಸನ್ನು ಕಳುಹಿಸಿದ್ದು, ಸದರಿ ನೋಟೀಸಿಗೂ ಅಭ್ಯರ್ಥಿಯು ಯಾವುದೇ ಉತ್ತರವನ್ನು ಸಲ್ಲಿಸಿರುವುದಿಲ್ಲ.

ಸದರಿ ಅಭ್ಯರ್ಥಿಯ ಪ್ರಕರಣವನ್ನು ಆಯೋಗದ ಮುಂದೆ ಮಂಡಿಸಿದ್ದು, ಆಯೋಗವು ಈ ಬಗ್ಗೆ ಕೂಲಂಕುಷವಾಗಿ ಪರಿಶೀಲಿಸಿ ಕೆಳಗಿನಂತೆ ದಂಡನೆ ವಿಧಿಸಲು ಆದೇಶಿಸಿರುತ್ತದೆ.

**ಆದೇಶ ಸಂಖ್ಯೆ: ಇ(1)165/2008–09/ಪಿಎಸ್‌ಸಿ, ಬೆಂಗಳೂರು, ದಿನಾಂಕ:26ನೇ ಜುಲೈ, 2008**

ಕರ್ನಾಟಕ ಲೋಕಸೇವಾ ಆಯೋಗದ ಅಧಿಕೃತ ಜ್ಞಾಪನ ಸಂಖ್ಯೆ: ಆಡಳಿತ 398/93–94/ ಪಿಎಸ್‌ಸಿ, ದಿನಾಂಕ:14.09.1993ರಲ್ಲಿ ಪ್ರದತ್ತವಾದ ಅಧಿಕಾರದ ಮೇರೆಗೆ ಶ್ರೀ ಶ್ರೀನಿವಾಸ ರಾವ್ ಬಿ.ಎಸ್. (ನೋಂ.ಸಂ.3311) ನಂ.2895/2, 5ನೇ ಮುಖ್ಯರಸ್ತೆ, 4ನೇ ಅಡ್ಡರಸ್ತೆ, ಎಂ.ಸಿ.ಸಿ. 'ಬಿ' ಬ್ಲಾಕ್, ದಾವಣಗೆರೆ–577004 ಇವರ 2007ನೇ ಸಾಲಿನಲ್ಲಿ ಆಯೋಗವು ನಡೆಸಿದ ಸಹಾಯಕ ಕಾರ್ಯಪಾಲಕ ಅಭಿಯಂತರರ ಪರೀಕ್ಷೆಯ ಅಭ್ಯರ್ಥಿತ್ವವನ್ನು ರದ್ದುಪಡಿಸುವ ದಂಡನೆಯನ್ನು ವಿಧಿಸಲಾಗಿದೆ.

ಆಯೋಗದ ಆದೇಶದ ಮೇರೆಗೆ,
**ವಿ.ಬಿ. ಪಾಟೀಲ್,**
ಪಿ.ಆರ್.1066 ಕಾರ್ಯದರ್ಶಿ,
ಕರ್ನಾಟಕ ಲೋಕಸೇವಾ ಆಯೋಗ.

**ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳ ನಿರ್ದೇಶನಾಲಯದ ನಡವಳಿಗಳು, ಬೆಂಗಳೂರು**

**ವಿಷಯ:** ಶ್ರೀ ರವಿಕುಮಾರ್ ಬಳ್ಳಾರಿ, ಶುಶ್ರೂಷಕ ವಿಕ್ಟೋರಿಯಾ ಆಸ್ಪತ್ರೆ, ಬೆಂಗಳೂರು ಇವರ ವಿರುದ್ಧ ಅನಧಿಕೃತ ಗೈರು ಹಾಜರಿ ಆರೋಪ ಬಗ್ಗೆ ಇಲಾಖೆ ವಿಚಾರಣೆ–ಅಂತಿಮ ಆದೇಶ.

**ಓದಲಾಗಿದೆ:**1) ನಿರ್ದೇಶನಾಲಯದ ದೋಷಾರೋಪಣೆ ಹಾಗೂ ತಿಳುವಳಿಕೆಯ ಪತ್ರದ ಸಂಖ್ಯೆ: ಡಿಪಿಎನ್(1): ಸಿಆರ್:49(ಎ):04–05, ದಿನಾಂಕ:30.06.2005.
2) ವಿಚಾರಣಾಧಿಕಾರಿಗಳ ನೇಮಕಾತಿ ಆದೇಶ ಸಂಖ್ಯೆ: ಡಿಪಿಎನ್: (1) ಸಿಆರ್:49ಎ:04–05, ದಿನಾಂಕ:14.09.2005.
3) ವಿಚಾರಣಾ ವರದಿಯ ಸಂಖ್ಯೆ: ವಿಅ:ವಿಚಾರಣೆ: ಎನ್‌ಜಿ:16:05–06, ದಿನಾಂಕ:10.02.2006.
4) ವಿಚಾರಣಾ ವರದಿ ನೌಕರರಿಗೆ ಜಾರಿ ಮಾಡಿದ ಸೂಚನಾ ಪತ್ರದ ಸಂಖ್ಯೆ: ಡಿಪಿಎನ್(1): ಸಿಆರ್:49(ಎ):04–05, ದಿನಾಂಕ:01.04.2006.

**ಪ್ರಸ್ತಾವನೆ:**

ಶ್ರೀ ರವಿಕುಮಾರ್ ಬಳ್ಳಾರಿ, ಶುಶ್ರೂಷಕ, ಇವರು ಹಿಂದೆ ವಿಕ್ಟೋರಿಯಾ ಆಸ್ಪತ್ರೆ, ಬೆಂಗಳೂರು ಇಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾಗ ದಿನಾಂಕ:24.06.2003 ರಿಂದ ಇಲ್ಲಿಯವರೆಗೆ ಅನಧಿಕೃತ ಗೈರು ಹಾಜರಿ ಬಗ್ಗೆ ಮೇಲೆ ಓದಲಾದ (1) ರಲ್ಲಿನ ಪತ್ರದಲ್ಲಿ ತಿಳುವಳಿಕೆ ಹಾಗೂ ದೋಷಾರೋಪಣಾ ಪಟ್ಟಿಯನ್ನು ಜಾರಿಗೊಳಿಸಿದ್ದು, ಇದಕ್ಕೆ ಅನುಗುಣವಾಗಿ ನೌಕರರು ಲಿಖಿತ ಅಹವಾಲನ್ನು ಸಲ್ಲಿಸಿರುವುದಿಲ್ಲ. ಆದಕಾರಣ ಸತ್ಯಾಸತ್ಯತೆಯನ್ನು ಕಂಡುಕೊಳ್ಳುವುದು ಸೂಕ್ತವೆಂದು ನಿರ್ಣಯಿಸಿ ಮೇಲೆ ಓದಲಾದ (2)ರಲ್ಲಿನ ಆದೇಶದಲ್ಲಿ ಮುಖ್ಯ ಜಾಗೃತ ಅಧಿಕಾರಿಗಳು, ಜಾಗೃತ ಕೋಶ, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳ ನಿರ್ದೇಶನಾಲಯ, ಬೆಂಗಳೂರು ಇವರನ್ನು ವಿಚಾರಣಾಧಿಕಾರಿಯನ್ನಾಗಿ ನೇಮಿಸಿದ್ದು ಮೇಲೆ ಓದಲಾದ (3) ರಂತೆ ವಿಚಾರಣಾಧಿಕಾರಿಗಳು ವಿಚಾರಣೆ ನಡೆಸಿ ವರದಿಯನ್ನು ಸಲ್ಲಿಸಿರುತ್ತಾರೆ. ಮೇಲೆ ಓದಲಾದ (4) ರಲ್ಲಿನ ಸೂಚನಾ ಪತ್ರದಲ್ಲಿ ವಿಚಾರಣೆ ವರದಿಯ ಪ್ರತಿಯನ್ನು ನೌಕರರಿಗೆ ಜಾರಿಗೊಳಿಸಲಾಗಿದೆ.

ವಿಚಾರಣಾಧಿಕಾರಿಗಳು ನೀಡಿರುವ ವಿಚಾರಣಾ ವರದಿಯಲ್ಲಿ ನಿರ್ಣಯದ ವರದಿಯನ್ನು ಪರಿಶೀಲಿಸಿದ ತರುವಾಯ ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಆದೇಶ ಸಂಖ್ಯೆ: ಡಿಪಿಎನ್: (1): ಸಿಆರ್:49(ಎ): 04–05, ಬೆಂಗಳೂರು, ದಿನಾಂಕ:5ನೇ ಜುಲೈ, 2008**

1957ರ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳ ಅಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಡಾ: ಉಷಾ ವಾಸುಂಕರ, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳ ನಿರ್ದೇಶಕರು ಆದ ನಾನು ಶ್ರೀ ರವಿಕುಮಾರ್ ಬಳ್ಳಾರಿ, ಶುಶ್ರೂಷಕರು, ವಿಕ್ಟೋರಿಯಾ ಆಸ್ಪತ್ರೆ, ಬೆಂಗಳೂರು ಇವರು ದಿನಾಂಕ:24.06.2003 ರಿಂದ ಇಲ್ಲಿಯವರೆಗೂ ಕರ್ತವ್ಯಕ್ಕೆ ಅನಧಿಕೃತ ಗೈರು ಹಾಜರಿಗೆ ದಂಡನೆಯಾಗಿ ಸದರಿ ನಿಯಮ 8(viii)ರ ಅನ್ವಯ ದಿನಾಂಕ:01.07.2008 ರಿಂದ ಜಾರಿಗೆ ಬರುವಂತೆ ಸೇವೆಯಿಂದ ವಜಾಗೊಳಿಸಿದ್ದೇನೆ.

ನಿರ್ದೇಶಕರು
ಪಿ.ಆರ್.814 ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು, ಬೆಂಗಳೂರು.

**ಗಣಿ ಮತ್ತು ಭೂವಿಜ್ಞಾನ ಇಲಾಖೆ, ಬೆಂಗಳೂರು ನಿರ್ದೇಶಕರ ನಡವಳಿ**

**ವಿಷಯ:** ಕೊಪ್ಪಳ ಜಿಲ್ಲೆ ಕುಷ್ಟಗಿ ತಾಲ್ಲೂಕು ಹುಲಗೇರಿ ಗ್ರಾಮದ ಸರ್ವೆ ನಂ.48/8 ರಲ್ಲಿ 2.20 ಎಕರೆಗೆ ಪಿಂಕ್ ಗ್ರಾನೈಟ್ ಶಿಲೆಗಾಗಿ ಮೆ: ಹೆಚ್.ಜೆ.ಎಸ್. ಸ್ಟೋನ್ಸ್ ಲಿ., ಇವರಿಗೆ ಮಂಜೂರಾಗಿದ್ದ ಕಲ್ಲು ಗಣಿ ಗುತ್ತಿಗೆ ಸಂಖ್ಯೆ:577ರ ಗುತ್ತಿಗೆಯನ್ನು ಪುನರ್ ಸ್ಥಾಪಿಸಿರುವ ಬಗ್ಗೆ.

**ಉಲ್ಲೇಖ:** ಸರ್ಕಾರದ ಪತ್ರ ಸಂಖ್ಯೆ: ಸಿಐ:101: ಎಂಎಂಎನ್–2007, ದಿನಾಂಕ:20.05.2008.

**ಪ್ರಸ್ತಾವನೆ:**

ಕೊಪ್ಪಳ ಜಿಲ್ಲೆ ಕುಷ್ಟಗಿ ತಾಲ್ಲೂಕು ಹುಲಗೇರಿ ಗ್ರಾಮದ ಸರ್ವೆ ನಂ.48/8 ರಲ್ಲಿ 2.20 ಎಕರೆ ವಿಸ್ತೀರ್ಣದಲ್ಲಿ ಪಿಂಕ್ ಗ್ರಾನೈಟ್ ಶಿಲೆಗಾಗಿ ಕಲ್ಲು ಗಣಿ ಗುತ್ತಿಗೆ ಸಂಖ್ಯೆ: 577ರ ಗುತ್ತಿಗೆಯನ್ನು ಮೆ: ಹೆಚ್.ಜೆ.ಎಸ್. ಸ್ಟೋನ್ಸ್ ಲಿ. ರವರ ಹೆಸರಿನಲ್ಲಿ ದಿನಾಂಕ:04.03.2003 ರಿಂದ 10 ವರ್ಷಗಳಿಗಾಗಿ ಗುತ್ತಿಗೆ ಮಂಜೂರು ಮಾಡಲಾಗಿತ್ತು. ಗುತ್ತಿಗೆದಾರರು ಗುತ್ತಿಗೆ ಮೇಲಿನ ಬಾಕಿಯನ್ನು ಪಾವತಿಸದೆ ಗುತ್ತಿಗೆಯನ್ನು ನಿಷ್ಕ್ರಿಯಗೊಳಿಸಿದ ಕಾರಣ ದಿನಾಂಕ:05.12.2006 ರಿಂದ ಜಾರಿಗೆ ಬರುವಂತೆ ನಿರ್ದೇಶಕರಿಗೆ ಪ್ರತ್ಯೋಜಿಸಿರುವ ಅಧಿಕಾರದ ಅಡಿಯಲ್ಲಿ ಗುತ್ತಿಗೆಯನ್ನು ರದ್ದುಗೊಳಿಸಲಾಗಿತ್ತು.

ಅದರಂತೆ ಗುತ್ತಿಗೆದಾರರು ಪರಿಷ್ಕರಣ ಅರ್ಜಿಯನ್ನು ನಿಯಮ 53(2) ರ ಕರ್ನಾಟಕ ಉಪ ಖನಿಜ ರಿಯಾಯಿತಿ ನಿಯಮ 1994 ರಂತೆ ಸರ್ಕಾರಕ್ಕೆ ಸಲ್ಲಿಸಿದ್ದು ಅದರಂತೆ ಸರ್ಕಾರವು ಉಲ್ಲೇಖಿತ ಪತ್ರದಲ್ಲಿ ಅರ್ಜಿಯನ್ನು ಪರಿಗಣಿಸಿ ಗುತ್ತಿಗೆಯನ್ನು ಪುನರ್ ಸ್ಥಾಪಿಸಲು ಆದೇಶಿಸಿರುವುದರಿಂದ ಈ ಆದೇಶ ಮಾಡಲಾಗಿದೆ.

**ಆದೇಶ ಸಂಖ್ಯೆ: ಗಭೂಇ: ಕಗಗು:577:2008–09, ದಿನಾಂಕ:30ನೇ ಸೆಪ್ಟೆಂಬರ್, 2008**

ಗಣಿ ಮತ್ತು ಭೂವಿಜ್ಞಾನ ಇಲಾಖೆಯ ನಿರ್ದೇಶಕರಿಗೆ ಸರ್ಕಾರದ ಪತ್ರದ ದಿನಾಂಕ:20.05.2008ರಲ್ಲಿ ಆದೇಶಿಸಿದಂತೆ ಕೊಪ್ಪಳ ಜಿಲ್ಲೆ ಕುಷ್ಟಗಿ ತಾಲ್ಲೂಕು ಹುಲಗೇರಿ ಗ್ರಾಮದ ಸರ್ವೆ ನಂ.48/8 ರಲ್ಲಿ 2.20 ಎಕರೆ ವಿಸ್ತೀರ್ಣದಲ್ಲಿ ಪಿಂಕ್ ಗ್ರಾನೈಟ್ ಶಿಲೆಗಾಗಿ ಕಲ್ಲು ಗಣಿ ಗುತ್ತಿಗೆ ಸಂಖ್ಯೆ:577 ರ ಗುತ್ತಿಗೆಯನ್ನು ಮೆ: ಹೆಚ್.ಜೆ.ಎಸ್. ಸ್ಟೋನ್ ಲಿ. ರವರ ಹೆಸರಿನಲ್ಲಿ ಮಂಜೂರಾಗಿದ್ದ ಕಲ್ಲು ಗಣಿ ಗುತ್ತಿಗೆ ಸಂಖ್ಯೆ:577 ಗುತ್ತಿಗೆಯನ್ನು ಗುತ್ತಿಗೆ ರದ್ದುಗೋಳಿಸಿದ ದಿನಾಂಕ:05.12.2006 ರಿಂದ ಗುತ್ತಿಗೆಯನ್ನು ಕರ್ನಾಟಕ ಉಪ ಖನಿಜ ರಿಯಾಯಿತಿ ನಿಯಮ 1994ರ ನಿಯಮಗಳ ಷರತ್ತಿಗೆ ಒಳಪಡಿಸಿ ಗುತ್ತಿಗೆಯನ್ನು ಪುನರ್ ಸ್ಥಾಪಿಸಲಾಗಿದೆ. ಕಲ್ಲು ಗಣಿ ಗುತ್ತಿಗೆ ಅವಧಿ ಹಾಗೂ ಇನ್ನಿತರ ಷರತ್ತಿನಂತೆ ಗುತ್ತಿಗೆಯನ್ನು ಪುನರ್ ಸ್ಥಾಪಿಸಲಾಗಿದೆ.

ನಿರ್ದೇಶಕರು.

ಪಿ.ಆರ್.1154 ಗಣಿ ಮತ್ತು ಭೂವಿಜ್ಞಾನ ಇಲಾಖೆ, ಬೆಂಗಳೂರು.

**ಗಣಿ ಮತ್ತು ಭೂವಿಜ್ಞಾನ ಇಲಾಖೆ, ಬೆಂಗಳೂರು ನಿರ್ದೇಶಕರ ನಡವಳಿ**

**ವಿಷಯ:** ಬೆಂಗಳೂರು ಗ್ರಾಮಾಂತರ ಜಿಲ್ಲೆ, ಕನಕಪುರ ತಾಲ್ಲೂಕು, ಕೆಬ್ಬೆಹಳ್ಳಿ ಗ್ರಾಮದಲ್ಲಿ ಮಲ್ಟಿಕಲರ್ ಗ್ರಾನೈಟ್‌ಗಾಗಿ ಶ್ರೀ ಕೆ. ನಾರಾಯಣರಾಜು ರವರಿಗೆ ಮಂಜೂರಾಗಿದ್ದ ಕಲ್ಲುಗಣಿ ಗುತ್ತಿಗೆ ಸಂಖ್ಯೆ:531ರ ಗುತ್ತಿಗೆಯನ್ನು ಗುತ್ತಿಗೆ ಮೇಲಿನ ಬಾಕಿ ಪಾವತಿಸದೆ ಇದ್ದ ಕಾರಣ ರದ್ದುಗೊಳಿಸಿರುವ ಬಗ್ಗೆ.

**ಉಲ್ಲೇಖ:** 1) ಕರ್ನಾಟಕ ಉಪಖನಿಜ ರಿಯಾಯಿತಿ ನಿಯಮ 1994ರ ನಿಯಮ 6(1) ಮತ್ತು ನಿಯಮ 39 ರಡಿ ಈ ಕಛೇರಿಯಿಂದ ಜಾರಿಯಾದ ನೋಟಿಸ್ ಸಂಖ್ಯೆ: ಗಭೂಇ: ಡಿಸಿಬಿ: ಕಗಗು:531:2004–05, ದಿನಾಂಕ:22.11.2004.

2) ಉಪ ನಿರ್ದೇಶಕರು, ರಾಮನಗರ ರವರ ಪತ್ರ ಸಂಖ್ಯೆ: ಗಭೂಇ/ಡಿಸಿಬಿ/ಕಗಗು–531/404:2007–08/ ದಿನಾಂಕ:02.08.2008.

**ಪ್ರಸ್ತಾವನೆ:**

ರಾಮನಗರ ಜಿಲ್ಲೆ ಕನಕಪುರ ತಾಲ್ಲೂಕು ಕೆಬ್ಬೆಹಳ್ಳಿ ಗ್ರಾಮದ ಸರ್ವೆ ನಂ.212ರಲ್ಲಿ ಶ್ರೀ ಕೆ. ನಾರಾಯಣರಾಜು ರವರಿಗೆ 2–00 ಎಕರೆಗೆ ದಿನಾಂಕ:20.07.2002 ರಿಂದ 10 ವರ್ಷಗಳಿಗಾಗಿ ಕಲ್ಲುಗಣಿ ಗುತ್ತಿಗೆ ಮಂಜೂರು ಮಾಡಲಾಗಿತ್ತು. ಈ ಕಛೇರಿಯ ಅಂತಿಮ ನೋಟೀಸು ಸಂಖ್ಯೆ: ಗಭೂಇ:ಡಿಸಿಬಿ ಕಗಗು/531/ ದಿನಾಂಕ:22.11.2004ರಲ್ಲಿ ಗುತ್ತಿಗೆದಾರರಿಗೆ ನಿಯಮಾನುಸಾರ ಸೂಚನಾ ಪತ್ರ ನೀಡಲಾಗಿತ್ತು. ಗುತ್ತಿಗೆದಾರರು ಬಾಕಿಯನ್ನು ಪಾವತಿಸಲು ವಿಫಲರಾಗಿರುತ್ತಾರೆ ಮತ್ತು 2007–08ರ ಮಾರ್ಚ್ ಅಂತ್ಯದವರೆಗೆ ಬಾಕಿ ರೂ. 2,69,640 ಗಳನ್ನು ಪಾವತಿಸಿರುವುದಿಲ್ಲ ಹಾಗೂ ಗಣಿಗಾರಿಕೆ ಕೈಗೊಳ್ಳದೆ ಒಂದು ವರ್ಷಕ್ಕಿಂತ ಹೆಚ್ಚಿನ ಅವಧಿಗೆ ನಿಷ್ಕ್ರೀಯವಾಗಿ ಇಟ್ಟಿರುತ್ತಾರೆ.

ಗಣಿ ಮತ್ತು ಭೂ ವಿಜ್ಞಾನ ಇಲಾಖೆಯ ನಿರ್ದೇಶಕರ ಗಮನಕ್ಕೆ ಬಂದಂತೆ ಗುತ್ತಿಗೆದಾರರು ಮೇಲಿನ ಉಲ್ಲೇಖಿತ ನೋಟೀಸುಗಳಿಗೆ ಯಾವ ರೀತಿ ಸ್ಪಂದಿಸಿರುವುದಿಲ್ಲವಾದ ಕಾರಣ ಕರ್ನಾಟಕ ಖನಿಜ ರಿಯಾಯಿತಿ 1994ರ ನಿಯಮ 6(1) ಮತ್ತು 39ರಡಿ ಸರ್ಕಾರದ ಅಧಿಸೂಚನೆ–III ಸಂಖ್ಯೆ: ಸಿಐ 418 ಎಂಆರ್‌ಸಿ 92 ದಿನಾಂಕ:02.07.1994 ಪ್ರತ್ಯೋಜಿಸಿರುವ ಅಧಿಕಾರದಂತೆ ಕಲ್ಲು ಗಣಿಗುತ್ತಿಗೆ ಸಂಖ್ಯೆ: 531 ರಡಿ ಕ್ರಮ ಜರುಗಿಸುವುದು ಅವಶ್ಯಕವಾದ್ದರಿಂದ ಈ ಕೆಳಗಿನಂತೆ ಆದೇಶ.

**ಆದೇಶ ಸಂಖ್ಯೆ: ಗಭೂಇ:/ಡಿಸಿಬಿ/ಕಗಗು:531:2007–08, ದಿನಾಂಕ:4ನೇ ಅಕ್ಟೋಬರ್, 2008**

ಕರ್ನಾಟಕ ಉಪ ಖನಿಜ ರಿಯಾಯಿತಿ 1994ರ ನಿಯಮ 6(1) ಮತ್ತು ನಿಯಮ 39ರಂತೆ ಗಣಿ ಮತ್ತು ಭೂವಿಜ್ಞಾನ ಇಲಾಖೆಯ ನಿರ್ದೇಶಕರಿಗೆ ಪ್ರತ್ಯೋಜಿಸಿರುವ ಅಧಿಕಾರದಡಿಯಲ್ಲಿ ರಾಮನಗರ ಜಿಲ್ಲೆಯ ಕನಕಪುರ ತಾಲ್ಲೂಕು, ಕೆಬ್ಬೆಹಳ್ಳಿ ಗ್ರಾಮದ ಸರ್ವೆ ನಂ.212ರಲ್ಲಿ 2–00 ಎಕರೆಗೆ ಮಲ್ಟಿಕಲರ್ ಗ್ರಾನೈಟ್‌ಗಾಗಿ ನೀಡಿದ್ದ ಕಲ್ಲುಗಣಿಗುತ್ತಿಗೆ ಸಂಖ್ಯೆ: 531ನ್ನು ತಕ್ಷಣದಿಂದ ಜಾರಿಗೆ ಬರುವಂತೆ ರದ್ದುಪಡಿಸಲಾಗಿದೆ. ಹಾಗೂ ಈ ಗುತ್ತಿಗೆಗೆ ಸಲ್ಲಿಸಿದ್ದ ಭದ್ರತಾ ಠೇವಣಿಯನ್ನು ಇಲಾಖೆಗೆ ಮುಟ್ಟುಗೋಲು ಹಾಕಿಕೊಳ್ಳಲಾಗಿದೆ.

ನಿರ್ದೇಶಕರು.

ಪಿ.ಆರ್.1202 ಗಣಿ ಮತ್ತು ಭೂವಿಜ್ಞಾನ ಇಲಾಖೆ, ಬೆಂಗಳೂರು.

**ELECTRICITY REGULATORY COMMISSION**
**BANGALORE**
**Notification No: D/07/9/Amdt.-I dated: 12th March, 2009**
**Amendment to "Karnataka Electricity Regulatory Commission (Fees) Regulations, 2004".**

**Preamble:**

Whereas the Karnataka Electricity Regulatory Commission, in exercise of powers conferred on it under Section 181 of the Act read with Section 86(1)(g) of the Electricity Act, 2003 (Central Act 36 of 2003), had prescribed the Regulations namely, KERC (FEES) Regulations, 2004, which was notified in Part-3 of Gazette of Karnataka dated 21-10-2004 (Page nos.1869 to 1871).

Whereas the Commission has reviewed the fee structure provided in the above Regulations and has felt that the fee prescribed therein for processing the Power Purchase Agreement and other Applications and petitions seeking orders of the Commission, is not commensurate with the quantum of work involved. It is, therefore, felt necessary to revise the fee structure for according approval for the Power Purchase Agreements in respect of Conventional fuel based plants, Non-conventional and Renewable Sources and Co-generation plants.

Whereas in exercise of powers conferred by Section 181 read with Section 86(1)(g) of the Electricity Act, 2003 (Central Act 36 of 2003) the Commission has proposed the amendment to the above Regulations. The draft of the amendment was sent to the stakeholders and also made available on the Notice Board of the Commission and of the Utilities. The draft amendments was also available on the Commission's website www.kere.org.

Interested persons / stakeholders were requested to send their comments / objections to the proposed amendment to the Secretary, Karnataka Electricity Regulatory Commission, 9/2, Mahalakshmi Chambers, M.G. Road, Bangalore- 560 001 on or before 31st January, 2009. In response to this, 7 persons /organizations have offered their views which have been duly considered.

In exercise of powers conferred on the Commission under the above provisions read with Section 181 of the Act, and all powers enabling it in that behalf, the Karnataka Electricity Regulatory Commission hereby makes the following amendments to the Regulations.

**1. Short title and commencement**

(i) These Regulations may be called the "Karnataka Electricity Regulatory Commission (Fees) (First Amendment) Regulations, 2009".

(ii) They shall come into force on the date of their publication in the Karnataka Government Gazette.

(iii) They shall extend to the whole of the State of Karnataka.

**2) Amendment to Clause 5:**

**Fees for Application / petitions, Annual Licence Fee etc.**

The "words and figures" appearing at Sl.No.3 and Sl. No10 in the column 3 of the table below shall be substituted by the words and figures indicated at column 4:

| Sl. No .as in the earlier Notification dated: 27.9.2004 | Particulars | Fees as existing | Fees as amended |
|---|---|---|---|
| 3 | Processing fee for approval of Power Purchase / Power procurement in respect of:<br>(i) Conventional fuel based plant<br>(ii) Non-conventional and renewable sources of energy including co-generation | (i) Rs. 1,000/- per MW or part thereof of installed capacity.<br>Rs. 500/- per MW or part thereof of installed capacity subject to a minimum of Rs. 1,000/-. | (i) Rs. 5,000/- per MW or part thereof of installed capacity.<br>Rs. 5,000/- per MW or part thereof of installed capacity |
| 10 | Other applications / petitions not covered above seeking orders of the Commission. | Rs. 500/- | Rs. 1,000/- |

By Order of the Commission,
Secretary,
Karnataka Electricity Regulatory Commission.

PD-11